ಕರ್ಣಾಟಕ

# ಮುದ್ರಾರಾಕ್ಷಸ ನಾಟಕಂ



ಆಸ್ಥಾನ ಮಹಾವಿದ್ವಾನ್

ಮೋಟಗಾನಹಳ್ಳಿ ರಾಮಶೇಷ ಶಾಸ್ತ್ರಿಗಳಿಂದ

ವಿರಚಿತವಾಗಿ ಪ್ರಕಾಶಪಡಿಸಲ್ಪಟ್ಟಿದೆ.



...ಎಸ್. ನರಸಿಂಹಯ್ಯ ಪ್ರೆಸ್, ಮೈಸೂರು.

1931

ಕರ್ಣಾಟಕ

# ಮುದ್ರಾರಾಕ್ಷಸ ನಾಟಕಂ



ಆಸ್ಥಾನ ಮಹಾವಿದ್ವಾನ್
ಮೋಟಿಗಾನಹಳ್ಳಿ ರಾಮಶೇಷ ಶಾಸ್ತ್ರಿಗಳಿಂದ
ವಿರಚಿತವಾಗಿ ಪ್ರಕಾಶಪಡಿಸಲ್ಪಟ್ಟಿದೆ.

ಕೆ. ಎಚ್. ನರಸಿಂಹಯ್ಯ ಪ್ರೆಸ್, ಮೈಸೂರು.

1931

# — ಉಪೋದ್ಘಾತ —

ಹಿಂದಣ ಕಾಲದ ನಡೆವಳಿಗಳನ್ನು ಅಗ್ಗಿ ತಕ್ಕ ವೇಷಭಾಷಾದಿಗಳಿಂದ ಈಗ ನಡೆಯುತ್ತಿರುವಂತೆ ಅಭಿನಯಿಸಿ ತೋರಿಸುವುದಕ್ಕೆ ರೂಪಕ ಅಥವಾ ನಾಟಕವೆಂದು ಹೆಸರು. ಈ ನಾಟಕವೆಂಬುದು ನಮ್ಮ ಭರತ ಖಂಡಕ್ಕೆ ಹೊಸದಾಗಿ ಬಂದುದಲ್ಲ. ಅನಾದಿಯಿಂದ ಇರುವುದೆಂಬುದಕ್ಕೆ ಅನೇಕ ಕಾರಣಗಳುಂಟು. ನಾಟಕಗಳಿಂದ ಮನೋವಿನೋದ, ಲೋಕಾನುಭವ-ಮೊದಲಾದ ಬಹಳ ಪ್ರಯೋಜನಗಳಾಗುತ್ತವೆ. ನಾಟಕಗಳೆಲ್ಲವೂ ಪ್ರಾಯಿಕವಾಗಿ ಗೀರ್ವಾಣ ಭಾಷೆಯಲ್ಲಿಯೇ ಬರೆಯಲ್ಪಟ್ಟಿವೆ. ಆ ನಾಟಕಗಳಲ್ಲಿ ಮುದ್ರಾರಾಕ್ಷಸವೆಂಬುದು ಬಹಳ ವಿಚಿತ್ರವಾದುದು. ಅಥವಾ ಅನ್ಯಾದೃಶವಾದುದು.

ಈ ಪ್ರಖ್ಯಾತವಾದ ನಾಟಕದ ಕಥಾಸನ್ನಿವೇಶವು ಸುತರಾಂ ಆಧಾರವಿಲ್ಲದೆ ಕವಿಯಿಂದಲೇ ಕಲ್ಪಿತವಾದುದಲ್ಲ. ಆದರೂ, ಸಾಮಾನ್ಯವಾಗಿ ಸಂಸ್ಕೃತ ಕವಿಸಮುದಾಯದ ಕವನಕ್ಕೆ ಆಧಾರವಾಗಿರುವ, ರಾಮಾಯಣಾದಿ ಇತಿಹಾಸಗಳೂ ಇದಕ್ಕೆ ಆಧಾರವಲ್ಲ. ಈ ನಾಟಕಕ್ಕೆ ಸಂಬಂಧಪಟ್ಟ ಪಾತ್ರಗಳಲ್ಲಿ ಸ್ತ್ರೀಪಾತ್ರವಿಲ್ಲವೆಂದೇ ಹೇಳಬಹುದು. ಆದರೆ ಒಂದು ಸ್ತ್ರೀಪಾತ್ರ ಮಾತ್ರವಿರುವುದು. ಈಕೆಯೇ ಚಂದನದಾಸನ ಪತ್ನಿಯು. ಈಕೆಯೂ ಅನುಷ್ಠೇಯವಾದ ಧರ್ಮವನ್ನೇ ಅವಲಂಬಿಸಿರಬೇಕೆಂಬ ಧೀರೋದಾತ್ತ ಗುಣವನ್ನು ತೋರಿಸುವಳೇ ಹೊರತು, ಸ್ತ್ರೀಯರಿಗೆ ಸಹಜವಾದ ಕೋಮಲತೆ, ಮಾಧುರ್ಯ ಮೊದಲಾದ ಗುಣಗಳನ್ನು ತೋರಿಸುವುದಿಲ್ಲ. ಆದುದರಿಂದ ಈ ನಾಟಕದಲ್ಲಿ ಶೃಂಗಾರರಸಕ್ಕೆ ಸ್ವಲ್ಪವೂ ಅವಕಾಶವಿಲ್ಲ. ವೀರರಸಪ್ರಧಾನವಾದ ರಾಜನೀತಿಯೇ ನಿಬಿಡೀಕೃತವಾಗಿರುವುದು. ಮತ್ತು ಈ ಗ್ರಂಥದಲ್ಲಿ ಶೃಂಗಾರಾದಿ ರಸಗಳಾಗಲಿ, ಶಬ್ದಾರ್ಥಾಲಂಕಾರಗಳಾಗಲಿ

ಬೇಕೆಂದು ನಿರೂಪಿಸಲ್ಪಟ್ಟಿರುವುದಿಲ್ಲ. ಆದರೂ ಈ ಗ್ರಂಥಶೈಲಿಯು ಸಂದರ್ಭಾನುಗುಣವಾಗಿ ಕಾರ್ಯನಿರ್ವಾಹಶಕ್ತಿಪ್ರದರ್ಶನಸಾಮರ್ಥ್ಯದಿಂದಲೂ, ಅಸದೃಶವಾದ ಪ್ರೌಢಿಯಿಂದಲೂ ರಸಾಲಂಕಾರಭರಿತವಾಗಿಯೇ ಇರುವುದು. ಆ ಆ ಪಾತ್ರಗಳ ಗುಣದೋಷಗಳನ್ನು ವರ್ಣಿಸುವಾಗ ಮಾರ್ದವವನ್ನು ಬಿಟ್ಟು, ಪೌರುಷ ಮಾರ್ಗವೇ ಅನುಸರಿಸಲ್ಪಟ್ಟಿರುವುದು

ಈ ಐತಿಹಾಸಿಕ ನಾಟಕದಲ್ಲಿ ಮುಖ್ಯನಾದ ನಾಯಕನೇ ಚಾಣಕ್ಯನು. ಇವನ ಬುದ್ಧಿಯಲ್ಲಿ ಲೇಶವಾದರೂ ಮಾಂದ್ಯವಿಲ್ಲ. ತನ್ನ ಶಕ್ತಿ, ಯುಕ್ತಿ, ಮಂತ್ರ, ತಂತ್ರ, ಸಾಹಸ, ಸನ್ನಾಹಗಳಿಂದ ಜಯವೇ ಆಗುವುದೆಂಬುದನ್ನು ಖಂಡಿತವಾಗಿ ತಿಳಿದಿದ್ದನು. ಏನಾದರೂ ಮಾಡಿ ಹಿಡಿದ ಕಾರ್ಯವನ್ನು ಗೆಲ್ಲಬೇಕೆಂಬುದೇ ಇವನ ನೀತಿಯು. ಬಹಳ ತಂತ್ರಗಾರನು. ಇವನಲ್ಲಿ ಗಾಂಭೀರ್ಯ, ಗುಪ್ತಮಂತ್ರತೆ, ಧೈರ್ಯ, ಸ್ಥೈರ್ಯ ಮೊದಲಾದ ಸುಗುಣಗಳಿದ್ದುವು. ಈತನಿಗೆ ಪ್ರತಿಕಕ್ಷಿಯಾದ ಮತ್ತೊಬ್ಬ ನಾಯಕನೇ ಅಮಾತ್ಯರಾಕ್ಷಸನು. ಇವನೂ ಬಹಳಮಟ್ಟಿಗೆ ಚಾಣಕ್ಯನಂತೆಯೇ ಮಂತ್ರಿಪದಕ್ಕೆ ಅರ್ಹನು. ಆದರೆ ಉದ್ದೇಶಿಸಿದ ಕಾರ್ಯಗಳನ್ನು ನಡೆಯಿಸುವುದರಲ್ಲಿ ತಪ್ಪಿಹೋಗುತ್ತಿದ್ದನು. ರಾಜಕಾರ್ಯಗಳಲ್ಲಿ ಚಾಣಕ್ಯನಷ್ಟು ತಂತ್ರಗಾರನಲ್ಲ; ಜಾಗರೂಕನೂ ಅಲ್ಲ. ಆದುದರಿಂದಲೇ ಇವನು ಕಡೆಗೆ ತನ್ನ ಶತ್ರುವಿನ ಸಾಹಸ, ಚಾತುರ್ಯ, ಸನ್ನಾಹಗಳ ಪೆಟ್ಟಿಗೆ ತಡೆಯಲಾರದೆ ತನ್ನ ಕಾರ್ಯವನ್ನು ಬಿಟ್ಟು, ತಾಟಸ್ಥ್ಯವನ್ನು ವಹಿಸಬೇಕಾದ ಸ್ಥಿತಿಗೆ ಬಂದನು. ಇವನು ತನ್ನ ಕಾರ್ಯದಲ್ಲಿ ಬದ್ಧಾದರನಾದರೂ ಭಗ್ನೋತ್ಸಾಹನಾಗಿ ಶಸ್ತ್ರಸನ್ನ್ಯಾಸವನ್ನು ಮಾಡಿದುದಕ್ಕೆ ಅನೇಕ ಕಾರಣಗಳಿದ್ದರೂ ಇದು ಮುಖ್ಯಕಾರಣವು. ಹೀಗೆ ಸಾಹಸಿಕರಾದ ಈ ಇಬ್ಬರೂ ರಾಜಕಾರ್ಯ ನಿರ್ವಾಹಶೀಲರಾಗಿ ಒಬ್ಬೊಬ್ಬರು ಒಂದೊಂದು ಭಾಗದಲ್ಲಿ ಕೃತಪ್ರತ್ಯಯರಾಗಿದ್ದರು. ಇವರು ಹಾಗಿರಲಿ. ಈಗ ಇವರಿಗೆ ಆಶ್ರಯರಾಗಿರುವ ಇನ್ನಿಬ್ಬರ ಗುಣಗಳನ್ನು ವಿಚಾರಿಸೋಣ.

ಇವರಲ್ಲಿ ಮೊದಲನೆಯವನು ಚಂದ್ರಗುಪ್ತನು. ಇವನು ಸೌಶೀಲ್ಯವುಳ್ಳ ಧೀರೋದಾತ್ತನು. ತನ್ನ ಮಂತ್ರಿಯಾದ ಚಾಣಕ್ಯನಲ್ಲಿ ಸಂಪೂರ್ಣವಾದ ಗೌರವ, ಮರ್ಯಾದೆ, ನಂಬಿಕೆ-ಇವುಗಳನ್ನು ಇಟ್ಟಿದ್ದನು. ಅಲ್ಲದೆ ತಾನು ಅವುಗಳನ್ನಿಡಲು ಮಂತ್ರಿಯು ತಕ್ಕವನೆಂಬುದನ್ನೂ ತಿಳಿದುಕೊಂಡಿದ್ದನು. ಮತ್ತೊಬ್ಬನೇ ರಾಕ್ಷಸನಿಗೆ ಆಶ್ರಯನಾದ ಮಲಯಕೇತುವು. ಇವನಲ್ಲಿ ಘನತೆ, ಗಾಂಭೀರ್ಯ, ಸೌಶೀಲ್ಯ ಮೊದಲಾದ ಗುಣಗಳಿರಲಿಲ್ಲ. ಹುಡುಗಾಟ, ಸಂಶಯ ಮೊದಲಾದ ದೋಷಗಳೂ ಇದ್ದುವು. ಪಾತ್ರಾಪಾತ್ರ ವಿವೇಚನೆಯಿಲ್ಲದೆ ವ್ಯತ್ಯಸ್ತವಾಗಿ ದ್ವೇಷ ಮೈತ್ರಿಗಳನ್ನು ಬೆಳೆಯಿಸುತ್ತಿದ್ದನು. ಈ ಎರಡು ಪಕ್ಷದ ಪರಿಜನರು ಧರ್ಮಾಧರ್ಮಗಳನ್ನು ವಿಮರ್ಶಿಸದೆ, ತಮಗೆ ನಿಯೋಗಿಸಿದ ಕಾರ್ಯಗಳನ್ನು ಚೆನ್ನಾಗಿ ನಡೆಯಿಸ ತಕ್ಕವರು. ಇದರಿಂದ ಇವರ ಕಾರ್ಯಗಳು ಎಂತವುಗಳಾಗಿದ್ದರೂ ಇವರಲ್ಲಿದ್ದ ಸ್ವಾಮಿಭಕ್ತಿಯು ಮಾತ್ರ ಗಣ್ಯವಾದುದು.

ಇನ್ನು ಈ ನಾಟಕದ ರಚನಾಕಾಲವನ್ನು ಸ್ವಲ್ಪಮಟ್ಟಿಗೆ ವಿಮರ್ಶಿಸೋಣ. ಈ ನಾಟಕವು ಒಂದು ಶತಾಬ್ದಕ್ಕೆ ಹಿಂದೆಯೇ ಪಾಶ್ಚಾತ್ಯಭಾಷೆಗಳಿಗೆ ಎಂದರೆ—1827 ರಲ್ಲಿ ವಿಲ್ಸನ್ ಎಂಬಾತನಿಂದ ಆಂಗ್ಲಭಾಷೆಗೂ, 1888 ರಲ್ಲಿ ಹೆನ್ರಿ ಎಂಬಾತನಿಂದ ಫ್ರೆಂಚ್ ಭಾಷೆಗೂ, 1897 ರಲ್ಲಿ ಎಲ್-ಫ್ರಿಟ್ಸ್ ಎಂಬಾತನಿಂದ ಜರ್ಮನ್ ಭಾಷೆಗೂ, 1874 ರಲ್ಲಿ ಎ. ಮರಜ್ಜ ಎಂಬಾತನಿಂದ ಇಟಾಲಿಯನ್ ಭಾಷೆಗೂ ಪರಿವರ್ತಿಸಲ್ಪಟ್ಟಿತು. ಅಂದಿನಿಂದಲೂ ಈ ನಾಟಕರಚನಾಕಾಲದ ವಿಷಯವಾಗಿ ಚರ್ಚೆಗಳು ನಡೆಯುತ್ತಲೇ ಇರುವುವು. ಈ ವಿಷಯದಲ್ಲಿ ನಮ್ಮ ಮತವನ್ನು ತಿಳುಹುವುದಕ್ಕೆ ಮೊದಲು ಮೇಲೆ ಹೇಳಿದ ಪಂಡಿತರ ಅಭಿಪ್ರಾಯಗಳನ್ನು ವಿಮರ್ಶಿಸಬೇಕಾದುದು ಅವಶ್ಯವು.

ವಿಲ್ಸನ್ನಿನ ಮತ—ಈತನು ಈ ನಾಟಕದ ಪಂಚಮ ಸಪ್ತಮಾಂಕಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ಮ್ಲೇಚ್ಛ ಪದಕ್ಕೆ ತುರುಷ್ಕರೇ ಅರ್ಥವೆಂದೂ,

ವಿಶಾಖದತ್ತಕವಿಯು ಜೈನ ಬೌದ್ಧರಿಗೆ ಭೇದವಿಲ್ಲವೆಂದು ಅಭಿಪ್ರಾಯ ಪಟ್ಟಿರುವನೆಂದೂ, ಊಹಿಸಿ ಈ ಗ್ರಂಥವು 11-12 ನೆಯ ಶತಮಾನಗಳಲ್ಲಿ ರಚಿಸಲ್ಪಟ್ಟಿತೆಂದು ಸಮರ್ಥಿಸಿದನು. ಆದರೆ—

ಶ್ಲೋ॥ ಕೃಷ್ಣಸಾರಸ್ತು ಚರತಿ ಮೃಗೋ ಯತ್ರ ಸ್ವಭಾವತಃ ।
ಆರ್ಯಾವರ್ತ ಸ್ಸವಿಜ್ಞೇಯಃ ॥ ಮತ್ತು—
ಮ್ಲೇಚ್ಛದೇಶ ಸ್ಸವಿಜ್ಞೇಯ ಆರ್ಯಾವರ್ತಾದತಃ ಪರಂ ॥

ಎಂಬ ಪ್ರಮಾಣಗಳಿಂದ, ವಿಂಧ್ಯ-ಹಿಮಾಲಯಗಳ ಮಧ್ಯವರ್ತಿಯಾದ ದೇಶಕ್ಕೆ ಆರ್ಯಾವರ್ತವೆಂದೂ, ಆದರ ಹೊರಗಣ ದೇಶಗಳಿಗೆ ಮ್ಲೇಚ್ಛ ದೇಶಗಳೆಂದೂ, ಅವ್ಯಕ್ತಭಾಷೆಯನ್ನಾಡುವುದರಿಂದ ಅಲ್ಲಿನ ನಿವಾಸಿಗಳಾದ ಆಂಧ್ರ, ಶಕ, ಹೂಣ ಮುಂತಾದವರಿಗೆ ಮ್ಲೇಚ್ಛರೆಂದೂ ಹೆಸರು. ಇವರ ಸಂಸ್ಕಾರಕ್ಕಾಗಿ ವೇದಕಾಲದಿಂದಲೂ ವ್ರಾತ್ಯಸ್ತೋಮ ಮುಂತಾದುವು ವಿಧಿಸಲ್ಪಟ್ಟಿರುವುವು. ಆ ಕಾಲದಲ್ಲಿ ಪ್ರಾಚ್ಯರಾದ ಮಗಧದೇಶೀಯರುಕೂಡ ವ್ರಾತ್ಯರೆಂದೇ ಗಣಿಸಲ್ಪಟ್ಟಿದ್ದರು. ಬರುತಬರುತ ಈ ಮ್ಲೇಚ್ಛ ಶಬ್ದವು ಸಂಸ್ಕೃತ ಸಾಹಿತ್ಯದಲ್ಲಿ ವಿಂಧ್ಯಾದ್ರಿಯ ಪ್ರತ್ಯಂತ ಪರ್ವತಗಳಲ್ಲಿ ವಾಸಿಸುತ್ತಿದ್ದ ಕಿರಾತ-ಶಬರಾದಿಗಳಿಗೂ, ಪಶ್ಚಿಮದಿಕ್ಕಿನಲ್ಲಿದ್ದ ಹೂಣ, ಚೀನ, ಶಕ, ಪಾರಸೀಕ, ಯವನರಿಗೂ, ತರುವಾಯ ಆರ್ಯಸಂಸ್ಕೃತಿಯು ದಕ್ಷಿಣಾಪಥದಲ್ಲಿ ಹರಡಿಕೊಂಡಹಾಗೆಲ್ಲ ದ್ರವಿಡ, ಕೇರಳ ದೇಶೀಯರಿಗೆ ಕೂಡ ಅನ್ವಯಿಸಲ್ಪಟ್ಟಿತು.

ಮಹಾಭಾರತ (I. 186. 33-7)

ಶ್ಲೋ॥ ಚಿವುಕಾಂಶ್ಚ ಪುಳಿಂದಾಂಶ್ಚ ಚೀನಾನ್ ಹೂಣಾನ್ ಸ ಕೇರಳಾನ್। ಸಸರ್ಜ ಫೇನತ ಸ್ಸಾಗಾಃ ಮ್ಲೇಚ್ಛಾನ್ ಬಹುವಿಧಾನಪಿ ॥

ಅಮರಸಿಂಹ—

ಶ್ಲೋ॥ ಭೇದಾಃ ಕಿರಾತ ಶಬರ ಪುಳಿಂದಾ ಮ್ಲೇಚ್ಛಜಾತಯಃ ।

ಮತ್ಸ್ಯಪುರಾಣ—

ಶ್ಲೋ || ಆಂಧ್ರಾ ಶ್ಯಕಾಃ ಪುಳಿಂದಾಶ್ಚ ಮೂಲಿಕಾ ಯವನಾ
ಸ್ತಥಾ | ಕೈವರ್ತಾಭೀರಶಬರಾ ಯೇಚಾನ್ಯೇ
ಮ್ಲೇಚ್ಛ ಸಂಭವಾಃ ||

ಇತ್ಯಾದಿ ಪ್ರಮಾಣಗಳಿಂದ ಶಕ, ಯವನ, ಹೂಣಾದಿಗಳಿಗೂ ಅನ್ವಯಿಸುವ ಮ್ಲೇಚ್ಛಪದಕ್ಕೆ ತುರುಷ್ಕರೇ ಅರ್ಥವೆಂದು ನಿಶ್ಚಯಿಸಲಾಗದು.

ಮತ್ತು ವಿಶಾಖದತ್ತ ಕವಿಯು ಜೈನ-ಬೌದ್ಧರಿಗೆ ಅಭೇದವನ್ನೂ ಹೇಳಿಲ್ಲ. ಲೋಕೋತ್ತರಮಾರ್ಗ, ಭದಂತ ಎಂಬ ಪದಗಳು ಬೌದ್ಧ ಮತಾನುಸಾರವಾದುವೇ ಸರಿ. ಕ್ರಿ. ಶ. 15 ನೆಯ ಶತಮಾನದ ವರೆಗೂ ಜೈನ-ಬೌದ್ಧ ದರ್ಶನಗಳು ಬೇರೆಯೆಂದೇ ಪರಿಗಣಿಸಲ್ಪಡುತ್ತಿದ್ದುವೆಂಬುದಕ್ಕೆ ಮಾಧವಾಚಾರ್ಯರ 'ಸರ್ವದರ್ಶನ ಸಂಗ್ರಹ' ಮುಂತಾದ ಗ್ರಂಥಗಳೇ ಸಾಕ್ಷಿಯಾಗಿವೆ. ಮತ್ತು ಭರತಖಂಡದಲ್ಲಿ ಬೌದ್ಧಮತವು ಅದೃಶ್ಯವಾಗುವುದಕ್ಕೆ ಕುಮಾರಿಲ, ಪ್ರಭಾಕರ, ಮಂಡನಮಿಶ್ರ, ಶಂಕರಾಚಾರ್ಯರೇ ಅಲ್ಲದೆ ಜೈನರೂ ಮುಖ್ಯಕಾರಣರೆಂಬುದು ನನ್ನ 'ಸೋರ್ಸ್ ಆಫ್ ಕರ್ಣಾಟಕ ಹಿಸ್ಟರಿ' ಪ್ರಥಮ ಸಂಪುಟದಲ್ಲಿ ಕೊಟ್ಟಿರುವ ಅಕಳಂಕ, ಪ್ರಭಾಚಂದ್ರಾದಿಗಳ ಚರಿತ್ರೆಯಿಂದ ವ್ಯಕ್ತವಾಗುವುದು. 7ನೆಯ ಶತಮಾನದಲ್ಲಿ ಬೌದ್ಧರ ಘಟಿಕಾ ಸ್ಥಾನವನ್ನು ಗೆದ್ದ ಅಕಳಂಕಭಟ್ಟನು ಹೇಳುವದೆಂತೆಂದರೆ—

ಶ್ಲೋ || ನಾಹಂಕಾರ ವಶೀಕೃತೇನ ಮನಸಾ ನದ್ವೇಷಿಣಾ
ಕೇವಲಂ | ನೈರಾತ್ಮ್ಯಂ ಪ್ರತಿಪದ್ಯ ನಶ್ಯತಿ ಜನೇ
ಕಾರುಣ್ಯ ಬುದ್ಧ್ಯಾಮಯಾ || ರಾಜ್ಞಃ ಶ್ರೀ ಹಿಮ
ಶೀತಲಸ್ಯ ಸದಸಿ ಪ್ರಾಯೋ ವಿದಗ್ಧಾತ್ಮನಾಂ |
ಬೌದ್ಧೌಘಾರ್ನ್ ಸಕಲಾರ್ನ್ ವಿಜಿತ್ಯ ಸಘಟಃ ಪಾದೇನ
ವಿಸ್ಫಾಟಿತಃ ||

ತರುವಾಯ 18, 19 ನೆಯ ಶತಾಬ್ದಗಳಲ್ಲಿ ಧುಂಡಿರಾಜನಂತೆಯೇ ಅನ್ಯಮತೀಯರು—“ಬೌದ್ಧರ ಒಂದು ಶಾಖೆಯೇ ಜೈನರು” ಎಂದು ಗಣಿಸತೊಡಗಿದರು. ಇಂತು ಜೈನ-ಬೌದ್ಧರು ಬೇರೆಯೇ ಹೊರತು ಒಂದಲ್ಲ ವಾದುದರಿಂದ ವಿಲ್ಸನ್ನಿನ ಮತವು ಸರ್ವಥಾ ಗ್ರಾಹ್ಯವಲ್ಲ.

## ಡಾ. ಕೀತ್ ಪಂಡಿತನ ಮತ –

ವಿಶಾಖದತ್ತನು—ಮೃಚ್ಛಕಟಿಕ, ರಘುವಂಶ; ಮಾಘನ-ಶಿಶುಪಾಲವಧ; ರತ್ನಾಕರನ-ಹರವಿಜಯ-ಇವುಗಳನ್ನು ಕೆಲವು ವಿಷಯಗಳಲ್ಲಿ ಅನುಸರಿಸಿರುವನೆಂದೂಹಿಸಿ, ಈ ನಾಟಕವು ಬಹುಶಃ 9 ನೆಯ ಶತಮಾನದ ಅಂತ್ಯಭಾಗದಲ್ಲಿ ರಚಿಸಲ್ಪಟ್ಟಿತೆಂದು ನಿರೂಪಿಸಿರುವನು.

ಆದರೆ—ಮೃಚ್ಛಕಟಿಕ ನಾಟಕದಲ್ಲಿ ಅಂಗಾರಕನಿಗೂ ಗುರುವಿಗೂ ಶತ್ರುತ್ವವು ಹೇಳಲ್ಪಟ್ಟಿರುವುದು. ವರಾಹಮಿಹಿರನು ಇದಕ್ಕೆ ಒಪ್ಪಲಿಲ್ಲ ವಾದುದರಿಂದ ಮೃಚ್ಛಕಟಿಕವು ವರಾಹಮಿಹಿರನಿಗೆ ಹಿಂದೆಯೇ ಎಂದರೆ, ಬಹುಶಃ ಕ್ರಿ. ಶ. 3 ನೆಯ ಶತಾಬ್ದದಲ್ಲಿ ಬರೆಯಲ್ಪಟ್ಟಿರಬಹುದು. ಮತ್ತು ಕಾಳಿದಾಸನು ಚಂದ್ರಗುಪ್ತವಿಕ್ರಮಾದಿತ್ಯನ ಕಾಲದಲ್ಲಿ ರಘುವಂಶವನ್ನು, ಕುಮಾರಗುಪ್ತನ ಜನನಕಾಲದಲ್ಲಿ ಕುಮಾರಸಂಭವವನ್ನೂ ಬರೆದನೆಂದೂ, ಮತ್ತು ಚಂದ್ರಗುಪ್ತನ ಅಳಿಯನಾದ ವಾಕಾಟಕ ಪ್ರವರಸೇನನಿಂದ ಆರಂಭಿಸಲ್ಪಟ್ಟ ಸೇತುಬಂಧವೆಂಬ ಕಾವ್ಯವನ್ನು ಚಕ್ರವರ್ತಿಯ ಅಪ್ಪಣೆಯ ಮೇರೆ ಪೂರೈಸಿದನೆಂದೂ ನಿಶ್ಚಯಿಸಲ್ಪಟ್ಟಿರುವುದರಿಂದ, ರಘುವಂಶವು ಸುಮಾರು ಕ್ರಿ. ಶ. 390 ರಲ್ಲಿ ಬರೆಯಲ್ಪಟ್ಟಿರಬಹುದೆಂದೂಹಿಸಬೇಕಾಗಿದೆ.

ಒಂದುವೇಳೆ ವಿಶಾಖದತ್ತನು ಕಾಳಿದಾಸನ ಅನಂತರ ಇದ್ದರೂ ಇರಬಹುದು. ಕೀತ್ ಪಂಡಿತನೇ, ವಿಶಾಖದತ್ತನ ಶೈಲಿಯು ದೀರ್ಘ ಸಮಾಸಭೂಯಿಷ್ಠವಾದ ಭವಭೂತಿಯ ಶೈಲಿಗಿಂತಲೂ ಪ್ರಾಚೀನವಾದು ದೆಂದು ಹೇಳಿರುವುದರಿಂದ ಈ ನಾಟಕವು ಕ್ರಿ. ಶ. 720 ಕ್ಕೆ ಮುಂಚೆಯೇ

ಬರೆಯಲ್ಪಟ್ಟಿತೆಂದು ಹೇಳಬೇಕು. ಮತ್ತು ವ್ಯಾಕರಣದಲ್ಲಿನ ಅಪೂರ್ವ ಪ್ರಯೋಗಗಳನ್ನು, ನೈಘಂಟುಕಾರಣ್ಯದಲ್ಲಿ ಅವಿತುಕೊಂಡಿದ್ದ ಅಸೂರ್ಯಂಪಶ್ಯಗಳಾದ ಪದಗಳನ್ನೂ ಪ್ರಯೋಗಿಸಿರುವ ಮಾಘ, ಮುರಾರಿ, ರತ್ನಾಕರ ಇವರ ಶೈಲಿಗಳನ್ನು, ಮುದ್ರಾರಾಕ್ಷಸ ನಾಟಕದ ಪದಪ್ರಯೋಗ ಶೈಲಿಗಳನ್ನೂ ಪರೀಕ್ಷಿಸಿದಲ್ಲಿ, ವಿಶಾಖದತ್ತನು ಇವರಿಗಿಂತಲೂ ಬಹಳ ಪ್ರಾಚೀನನೆಂಬುದು ಸ್ಪಷ್ಟವಾಗುವುದು. ಆದಕಾರಣ ಶೈಲಿಯ ಆಧಾರದಿಂದಲೇ ಯಾರು ಪ್ರಾಚೀನರೆಂದು ನಿರ್ಧರಿಸುವುದು ಸಾಹಸವೆನಿಸದಿರದು. ಅಲ್ಲದೆ, ಈ ನಾಟಕದ ಭರತವಾಕ್ಯದ « ವಾರಾಹೀ ಮಾತ್ಮಯೋನೇ ಸ್ತನು ಮವನ ವಿಧಾ ವಾಸ್ಥಿತಸ್ಯಾನುರೂಪಾಂ'' ಎಂಬ ಶ್ಲೋಕಕ್ಕೂ, ಶಿಶುಪಾಲ ವಧೆಯ I. 47 ನೆಯ « ಸಟಾಚ್ಛಟಾಭಿನ್ನಘನೇನ ಬಿಭ್ರತಾ ನೃಸಿಂಹ ! ಸೈಂಹೀ ಮತನುಂ ತನುಂ ತ್ವಯಾ'' ಎಂಬ ಶ್ಲೋಕಕ್ಕೂ, «ವಾರಾಹೀಂ ತನುಂ-ಸೈಂಹೀಂ ತನುಂ'' ಎಂಬ ಪದಗಳಿಂದ ಸಾಮ್ಯವನ್ನು ಕಲ್ಪಿಸಿ, ವಿಶಾಖದತ್ತನು ಮಾಘನನ್ನು ಅನುಕರಿಸಿರುವನೆಂಬುದೂ ನಂಬತಕ್ಕದಲ್ಲ. ಈ ಕಾರಣಗಳಿಂದ ಡಾ. ಕೀತ್ ಪಂಡಿತನ ಮತವು ಸರಿಯಲ್ಲ.

### ಡಾ|| ಹರ್ಮನ್ ಜೇಕೋಬಿಯ ಮತ—

ಈ ಪ್ರಸಿದ್ಧ ಜರ್ಮನ್ ಪಂಡಿತನು ಯಾವುದೋ ಒಂದು ಪ್ರತಿಯ ಆಧಾರದ ಮೇಲೆ, ಪ್ರಸ್ತಾವನೆಯಲ್ಲಿ ಆಸನ್ನವಾಗಿತ್ತೆಂದು ಹೇಳಲ್ಪಡುವ ಚಂದ್ರಗ್ರಹಣವು ಕಥೆಯು ಮುಗಿದ ಬಳಿಕ, ಮಾರ್ಗಶಿರ ಪೂರ್ಣಿಮೆಯಲ್ಲಿ ಎಂದರೆ, ಕ್ರಿ. ಶ. 860ನೆಯ ಡಿಸೆಂಬರು 2 ನೆಯ ದಿನದಲ್ಲಿ ಆಗಬೇಕಾಗಿತ್ತೆಂದೂ, ಮತ್ತು ಚಂದ್ರಗುಪ್ತ ಎಂಬ ಪದದ ಪಾಠಾಂತರಗಳಲ್ಲೊಂದಾದ ಅವಂತಿವರ್ಮ ಎಂಬುದನ್ನು ಗ್ರಹಿಸಿ, ಈ ಅವಂತಿವರ್ಮನು ಕ್ರಿ. ಶ. 855 ರಿಂದ 883 ರ ವರೆಗೆ ಕಾಶ್ಮೀರದೇಶವನ್ನಾಳಿದನೆಂದೂ, ಇವನ ಮಂತ್ರಿಯಾದ ಶೂರಸೇನನ ಪ್ರೋತ್ಸಾಹದಿಂದ ವಿಶಾಖದತ್ತನ ನಾಟಕವು ರಾಜಾಸ್ಥಾನದಲ್ಲಿ ಪ್ರದರ್ಶಿಸಲ್ಪಟ್ಟಿತೆಂದೂ, ಇವನೇ ಭರತವಾಕ್ಯದಲ್ಲಿ ನಿರ್ದೇಶಿಸಲ್ಪಟ್ಟಿರುವ

ನೆಂದೂ ಊಹಿಸಿ ಈ ನಾಟಕವು ತದನಂತರದಲ್ಲಿ ಬರೆಯಲ್ಪಟ್ಟಿರಬೇಕೆಂದು ನಿರೂಪಿಸಿದನು. (W. Z. K. M, Vol. V. 1891. pp. 25-35.)

ಈ ನಿರೂಪಣವು ಕಾಕತಾಳನ್ಯಾಯದಂತೆಯೇ ಸರಿ. ಹಾಗೆ ಊಹಿಸಿದಲ್ಲಿ "ರಕ್ಷತ್ವೇನಂಹಿ ಬುಧಯೋಗಃ'' ಎಂಬ ಸೂತ್ರಧಾರನ ವಾಕ್ಯಕ್ಕೂ, ಚಾಣಕ್ಯನ ಪ್ರವೇಶವಾಕ್ಯಗಳಿಗೂ ಸಂಬಂಧವು ತಪ್ಪಿಹೋಗು ವುದು ಮತ್ತು ಗ್ರಂಥನಾಯಕನಿಗೆ ಮಂಗಳವನ್ನು ಹಾರೈಸುವುದು ಸಹಜ. ಆದುದರಿಂದ ಇಲ್ಲಿ ಚಂದ್ರಗುಪ್ತನನ್ನೇ ಗ್ರಹಿಸಬೇಕು. ಒಮ್ಮೆ ಪಾಠಾಂತರ ಗಳ ಆಧಾರದಿಂದ ಅವಂತಿವರ್ಮನನ್ನೇ ಗ್ರಹಿಸಬೇಕೆಂದು ವಾದಿಸಿದಲ್ಲಿ, ಅದೇ ಆಧಾರದಿಂದ ಕ್ರಿ. ಶ. 620 ರಲ್ಲಿದ್ದ ರಾಷ್ಟ್ರಕೂಟವಂಶದ ಪ್ರಥಮ ದಂತಿ ವರ್ಮನನ್ನಾಗಲಿ, ಕ್ರಿ. ಶ. 754 ರಲ್ಲಿದ್ದ ಅದೇ ವಂಶದ ದ್ವಿತೀಯ ದಂತಿವರ್ಮ ನನ್ನಾಗಲಿ, ಕ್ರಿ. ಶ. 779 ರಲ್ಲಿದ್ದ ಪಲ್ಲವ ವಂಶದ ಮತ್ತೊಬ್ಬ ದಂತಿವರ್ಮ ನನ್ನಾಗಲಿ ಗ್ರಹಿಸಿ, ಯಾವನೋ ಒಬ್ಬನ ಕಾಲದಲ್ಲಿ ವಿಶಾಖದತ್ತನು ಈ ನಾಟಕವನ್ನು ಬರೆದನೆಂಬ ವಿತಂಡಾವಾದವೂ ಬರಬಹುದು. ಆದುದರಿಂದ ಪಾಠಾಂತರಗಳ ಆಧಾರಮಾತ್ರದಿಂದಲೇ ನಿರ್ಣಯಿಸಲಾಗದು. ಮತ್ತು ಈ ವಿಶಾಖದತ್ತನು ಮಗಧರಾಜ್ಯದವನೆಂದೂ, ಪೂರ್ವಪಶ್ಚಿಮ ಸೀಮೆಗ ಳಾದ ಬ್ರಹ್ಮಪುತ್ರ ಜಲಂಧರ ಪ್ರಾಂತಗಳ ಮಧ್ಯವರ್ತಿಯಾದ ದೇಶಗಳು ಹೊರತು, ಉಳಿದ ಭಾಗಗಳೆಲ್ಲವೂ ಮ್ಲೇಚ್ಛದೇಶಗಳೆಂದೂ ನಿರ್ಧರಿಸಲು ಕಾರಣಗಳಿವೆ. ಇದರಂತೆಯೇ ವಿಶಾಖದತ್ತನು—ಕುಲೂತ, ಪಾರಸಿ, ಕಾಶ್ಮೀರ ದೇಶಗಳ ರಾಜರನ್ನು ಮ್ಲೇಚ್ಛರೆಂದು ಹೇಳಿರುವನು. ಆದುದರಿಂದ, ಈ ನಾಟಕವು ಕಾಶ್ಮೀರದೇಶದ ಅವಂತಿವರ್ಮನ ಆಸ್ಥಾನದಲ್ಲಿಯೇ ಪ್ರದರ್ಶಿಸ ಲ್ಪಟ್ಟಿತೆಂದು ನಂಬಲಾಗದು. ಅಲ್ಲದೆ ಸಂಪ್ರದಾಯಸಿದ್ಧವಾದ ಪ್ರಾಚೀನ ಪಾಠದಂತೆ ನಾಂದೀಭಾಗದಲ್ಲಿ ಹೇಳಲ್ಪಟ್ಟ ಗ್ರಹಣವು, ಕಥೆಯು ನಡೆಯುವು ದಕ್ಕೆ ಮೊದಲೇ ಆಸನ್ನವಾಗಿರಬೇಕೆಂದೂ, ಚಂದ್ರಗುಪ್ತನೆಂಬ ಪಾಠವೇ ಸಾಧುವೆಂದೂ ನಿರ್ಧರಿಸುವುದೇ ಸಮಂಜಸವು.

ಭಾರತೀಯರಾದ ಕೆ. ಟಿ. ತೆಲಂಗರ ಮತ—

ಪಾಟಲೀಪುತ್ರವು ಕ್ರಿ. ಶ. 756 ರಲ್ಲಿ ಗಂಗಾಪ್ರವಾಹದಿಂದ ನಾಶವಾಯಿತೆಂದು 'ಕಾಣ್‌ಯೂಯೆಣ್' ಎಂಬ ಚೀನಾಯಾತ್ರಿಕನಿಂದ ತಿಳಿದುಬರುವುದರಿಂದಲೂ, (Cunninghau, Arch. Sur. Rep. Vol VIII p. 12., Vol XI. 156.) ಈ ನಾಟಕರಚನಾಕಾಲದಲ್ಲಿ ಬೌದ್ಧರು ಗೌರವಾರ್ಹರಾಗಿದ್ದರೆಂದು ಊಹಿಸಬಹುದಾಗಿರುವುದರಿಂದಲೂ, ಭರತವಾಕ್ಯದಲ್ಲಿನ ಅವಂತಿವರ್ಮ ಎಂಬ ಪಾಠಾಂತರವು ಶ್ರೀಹರ್ಷನ ಸಮಕಾಲಿಕನು, ಆತನೊಡನೆ ಸಂಬಂಧವನ್ನು ಬೆಳಸಿದವನೂ ಆದ ಅವಂತಿವರ್ಮನನ್ನು ನಿರ್ದೇಶಿಸುವುದರಿಂದಲೂ, ಇದಕ್ಕೆ ಉಪಷ್ಟಂಭಕವಾಗಿ ಇಲ್ಲಿ ಹೇಳಲ್ಪಟ್ಟ ಹೂಣರು ಶ್ರೀಹರ್ಷರಾಜನಿಂದ ಜಯಿಸಲ್ಪಟ್ಟವರಾಗಿರಬಹುದಾದುದರಿಂದಲೂ, ಈ ನಾಟಕವು ಬಹುಶಃ 7 ನೆಯ ಶತಾಬ್ದದ ಆದಿಭಾಗದಲ್ಲಿ ರಚಿತವಾಯಿತೆಂದು ಇವರು ಸಿದ್ಧಾಂತಿಸಿರುವರು.

ಮೇಲೆ ಹೇಳಿದಂತೆ ಅವಂತಿವರ್ಮವೆಂಬ ಪಾಠವನ್ನು ಗ್ರಹಿಸಿ, ಈತನು ಪ್ರಾಯಃ ಮೌಖಾರಿ ವಂಶದವನೆಂದು ನಿರ್ಧರಿಸಿದ ತೆಲಂಗರ ಮತವು ನಿರಾಧಾರವಾದುದು. ಇವರು ಕೊಟ್ಟ ಮಿಕ್ಕೆರಡು ಕಾರಣಗಳನ್ನು ಪರಿಶೀಲಿಸಬೇಕಾಗಿದೆ. ವಿಶಾಖದತ್ತನ ಕಾಲದಲ್ಲಿ ಪಾಟಲೀಪುತ್ರವಿನ್ನೂ ನಾಶವಾಗಿರಲಿಲ್ಲವೆಂದೊಪ್ಪಿಕೊಂಡರೂ, ಕಾಣ್‌ಯೂಯೆಣ್ ಎಂಬುವನು ಹೇಳಿದಂತೆ ಕ್ರಿ. ಶ. 756ರಲ್ಲಿ ಆದ ನಾಶಕ್ಕೆ ಎಷ್ಟು ವರ್ಷಗಳ ಮುಂಚಿತವಾಗಿ ವಿಶಾಖದತ್ತನು ಇದ್ದನೆಂಬುದನ್ನು ತೆಲಂಗರು ನಿರ್ಧರಿಸಿಲ್ಲ. ಮತ್ತು, ಕುಸುಮಪುರವು ಇನ್ನೂ ಎರಡುಮೂರುಸಲ ಗಂಗಾಪ್ರವಾಹದಲ್ಲಿ ಮುಳುಗಿ ಹೋಯಿತೆಂದು ತಿಳಿದುಬರುವುದು.

ಕರ್ಪೂರಪ್ರಕರದಲ್ಲಿ—“ ವೀರನಿರ್ವಾಣತೋ ವರ್ಷಶತೇಷು ಏಕೋನವಿಂಶತ್ ಚತುರ್ದಶಾಬ್ದಯುಕ್ತೇಷು ವ್ಯತೀತೇಷು ದುರಾಶಯಃ ಜೈತ್ರ

ಸಪ್ತವಿಂಾದಿನೇ ವಿಷ್ಣೌ ಭಾವೀ ಮ್ಲೇಚ್ಛಕುಲೋ ನೃಪಃ ಕಲ್ಕಿರುದ್ಧತಃ ಚತುರ್ವಕ್ತ್ರೋನಾಮ ತೃತೀಯವಿಶ್ರುತಃ..., ಅಹೋರಾತ್ರೇಷು ಸಪ್ತದಶಸು ವೃಷ್ಟಿಂ ವಿಧಾಸ್ಯತಿ ಮೇಘಃ, ಗಂಗಾಪ್ರವಾಹಃ ತನ್ನಗರಂ ಪ್ಲಾವಯಿಷ್ಯತಿ"

ಎಂದು ಹೇಳಿರುವುದರಿಂದ ವೀರನಿರ್ವಾಣಾನಂತರ 1914 ವರ್ಷದಲ್ಲಿ ಕಲ್ಕಿಯ ಜನ್ಮವಾಗಿ ಅವನು 86 ನೆಯ ವರ್ಷದಲ್ಲಿ ಸಾಯುವಾಗ ಗಂಗಾಪ್ರವಾಹವು ನಗರವನ್ನು ನಾಶಗೊಳಿಸುವುದೆಂದು ಹೇಳಿರುವ ಅರ್ಥವು ಕ್ರಿ.ಶ. 1472 ರಲ್ಲಿ ನಡೆದಿರಬೇಕು. ಇದಾದಮೇಲೆ ಷೇರ್ಷಹನು ಆ ನಿವೇಶನದ ಮೇಲೆಯೇ ಈಗಿನ ಪಾಟ್ಣಾವನ್ನು ಕಟ್ಟಿಸಿರಬೇಕು. (Ind. Ant. Vol. II) ಮತ್ತು ಇದಕ್ಕೆ ಮುಂಚೆಯೇ ಎಂದರೆ ಕ್ರಿ. ಶ. 472 ರಲ್ಲಿ ಒಂದುಸಲ ಪಾಟಲೀಪುತ್ರ ನಾಶವಾಯಿತೆಂದು ಜೈನಗ್ರಂಥಗಳಿಂದ ತಿಳಿದು ಬರುತ್ತದೆ. ತ್ರೈಲೋಕ್ಯದೀಪಿಕೆಯಲ್ಲಿ:—ವೀರನಿರ್ವಾಣಾನಂತರ ಆರುನೂರೈದು ವರ್ಷ, ಐದು ಮಾಸಗಳು ಕಳೆದ ಬಳಿಕ ಶಕರಾಜನಾಳುವನೆಂದು, ಸಾವಿರ ವರ್ಷಕ್ಕೆ ಸರಿಯಾಗಿ ಕಲ್ಕಿಯ ಜನನವಾಗುವುದೆಂದೂ, ಗುಣಭದ್ರನ ಉತ್ತರಪುರಾಣದಲ್ಲಿ–ಶಿಶುಪಾಲ–ಪೃಥ್ವೀಸುಂದರಿಯರ ಮಗನಾದ ಕಲ್ಕಿಯು ಮಹಾಮಾಘಸಂವತ್ಸರದಲ್ಲಿ ಹುಟ್ಟಿ, ಎಪ್ಪತ್ತು ವರ್ಷ ಜೀವಿಸಿ, ನಾಲ್ವತ್ತು ವರ್ಷ ರಾಜ್ಯಭಾರ ಮಾಡುವನೆಂದೂ, ನೇಮಿಚಂದ್ರನ ತ್ರಿಲೋಕಸಾರದಲ್ಲಿ-ವೀರನಿರ್ವಾಣಾನಂತರ ಸಾವಿರ ವರ್ಷಕ್ಕೆ ಕಲ್ಕಿಯು ಹುಟ್ಟುವನೆಂದು, ಅವನ ಮರಣಕಾಲದಲ್ಲಿ ಪಾಟಲೀಪುತ್ರ ನಾಶವಾಗುವದೆಂದೂ ಹೇಳಿದೆ.

ಈ ಕಲ್ಕಿಯು ಮಿಹಿರಕುಲನೇ ಆಗಲೀ, ಅಥವಾ ಯಶೋಧರ್ಮನೇ ಆಗಲಿ, ಕ್ರಿ. ಶ. 472 ರಲ್ಲಿದ್ದನೆಂದೂ, ಆ ಕಾಲದಲ್ಲಿ ಪಾಟಲೀಪುತ್ರವು ನಾಶವಾಯಿತೆಂದೂ ನಿರ್ಧರಿಸಬಹುದಾಗಿದೆ. ಆದುದರಿಂದ ವಿಶಾಖದತ್ತನು ಕ್ರಿ. ಶ. 1472 ಕ್ಕೆ ಹಿಂದೆಯೋ, 756 ಕ್ಕೆ ಹಿಂದೆಯೋ ಅಥವಾ 472 ಕ್ಕೆ

ಹಿಂದೆಯೋ ಯಾವಾಗ ಇದ್ದನೆಂಬುದನ್ನು ಇಷ್ಟರಮಾತ್ರದಿಂದಲೇ ನಿಶ್ಚ ಯಿಸಲಾಗದು.

ತೆಲಂಗರ ಎರಡನೆಯ ವಾದವು—ವಿಶಾಖದತ್ತನ ಕಾಲದಲ್ಲಿ ಬೌದ್ಧಮತವು ಅತ್ಯುಚ್ಛ್ರಾಯಸ್ಥಿತಿಯಲ್ಲಿದ್ದಿತೆಂಬುದು. ಚಂದನದಾಸನ ಸ್ವಾರ್ಥತ್ಯಾಗವು ಬುದ್ಧರ ಕೀರ್ತಿಯನ್ನು ಕೂಡ ಕಳಂಕಿತವಾಗಿ ಮಾಡಿದ್ದಿತೆಂದು ಈ ನಾಟಕದಲ್ಲಿ ಉಕ್ತವಾಗಿದೆ. ಇಲ್ಲಿ ಬುದ್ಧರೆಂದರೆ ಗೌತಮಬುದ್ಧನ ಬೋಧಿಸತ್ತ್ವಾವತಾರಗಳೇ ಹೊರತು, ಬೌದ್ಧಮತಾನುಯಾಯಿಗಳೆಂದಲ್ಲ. ಜಾತಕ ಕಥೆಗಳಲ್ಲಿ ಬುದ್ಧನು ಶಿಬಿ, ಜೀಮೂತವಾಹನಾದಿಗಳಂತೆ ಅವತರಿಸಿ, ತನ್ನ ಪ್ರಾಣವನ್ನೇ ಅರ್ಪಿಸಿ, ಲೋಕಕ್ಕೆ ನೀತಿಯನ್ನು ಬೋಧಿಸಿದನೆಂದು ಹೇಳಿದೆ. ಇದರಿಂದ ಬೌದ್ಧರು ವಿಶಾಖದತ್ತನ ಕಾಲದಲ್ಲಿ ಗೌರವಾರ್ಹರಾಗಿದ್ದರೆಂದು ಹೇಳಲಾಗದು. ಗೌತಮನ ಕಾಲದಲ್ಲಿಯೇ ಶ್ರಮಣರನೇಕರು ದುರಾಚಾರಗಳಲ್ಲಿ ಪ್ರವರ್ತಿಸಲು, ಅವರಿಗೆ ಬುದ್ಧನು ಪ್ರಾಯಶ್ಚಿತ್ತವನ್ನು ವಿಧಿಸಿದನೆಂದು ತಿಳಿದುಬರುವುದು.

ಮತ್ತು ಕ್ರಿ.ಶ. 1 ನೆಯ ಶತಮಾನದಲ್ಲಿಯೇ ನಾಗಾರ್ಜುನಾದಿಗಳಿಂದ ಪ್ರಾರಂಭಿಸಲ್ಪಟ್ಟ ಮಹಾಯಾನದಲ್ಲಿ ವಾಮಾಚಾರಗಳು ಸೇರಿ ಮತವು ಕೆಡುವುದಕ್ಕೆ ಪ್ರಾರಂಭವಾಯಿತು. ಇದಕ್ಕನುಸಾರವಾಗಿ ಸಂಸ್ಕೃತ ಸಾಹಿತ್ಯದಲ್ಲಿ ಸಂವಾಹಕನೆಂಬ ಭಿಕ್ಷುವು ಪರಿಹಾಸಾಸ್ಪದನಾಗಿರುವನು. ಬಾಣಾದಿಗಳು-ಪಿಂಛಧಾರಿಯೂ, ನಗ್ನನೂ ಆದ ಶ್ರಮಣನನ್ನು ನೋಡಿದರೆ ಅಪಶಕುನವೆಂದು ಹೇಳಿರುವರು. ಈ ನಾಟಕದಲ್ಲಿಯೂ ಹಾಗೆಯೇ. ಆದರೆ ಕಾಳಿದಾಸ, ಭವಭೂತಿಗಳು 'ಪರಿವ್ರಾಜಕರು' (ಬ್ರಾಹ್ಮಣ-ಸನ್ಯಾಸಿಗಳು) ಗೌರವಾರ್ಹರೆಂದು ಹೇಳಿರುವರು. ಈ ಕ್ಷಪಣಕರ ಮೇಲಣ ಅನಾದರಣೆಯು ಕೇವಲ ದ್ವೇಷಜನ್ಯವಾದುದಲ್ಲ. ಶ್ರಮಣ-ಕ್ಷಪಣಕರು ಸ್ವಧರ್ಮವನ್ನು ಬಿಟ್ಟು ನಿರಾತಂಕವಾಗಿ ದೇಶದೇಶಗಳನ್ನು ತಿರುಗುತ್ತಾ,

ರಾಜಕೀಯ ವಿಷಯಗಳಲ್ಲಿ ಗೂಢಚಾರರೆನಿಸಿ ಕುಹಕತಂತ್ರನಿಪುಣರಾಗಿ ಇದ್ದರು. ಇಷ್ಟೇ ಅಲ್ಲ. ಇನ್ನೂ ನಿಂದ್ಯಕಾರ್ಯಗಳಲ್ಲಿ ಪ್ರವರ್ತಿಸುತ್ತಿದ್ದರೆಂದು ದಂಡಿಯ (ಕ್ರಿ. ಶ. 600) ದಶಕುಮಾರಚರಿತೆಯಲ್ಲಿನ ನಿತಂಬಾವತಿಯೆಂಬ ಸನ್ಯಾಸಿನಿಯ ಚರ್ಯೆಯಿಂದಲೂ, ಕಥಾಸರಿತ್ಸಾಗರದಲ್ಲಿನ ದೇವಸ್ಮಿತೆಯೆಂಬವಳ ಚರಿತ್ರೆಯಿಂದಲೂ ತಿಳಿದುಬರುವುದು.

ಸಾಮಾನ್ಯವಾಗಿ ತುರೀಯಾಶ್ರಮವನ್ನು ಗ್ರಹಿಸಿದವರು ಗೌರವಾರ್ಹರೇ. ಅವರು ರಾಜಾಪಥ್ಯವನ್ನು ಮಾಡಿದರೂ, ಅವಧ್ಯರಾದುದರಿಂದ ದೇಶದಿಂದ ಹೊರಡಿಸಲ್ಪಡುತ್ತಿದ್ದರೇ ಹೊರತು ಪ್ರಾಣಾಂತವಾದ ದಂಡವನ್ನು ಪಡೆಯುತ್ತಿರಲಿಲ್ಲ. (ಹೀಗೆಯೇ ಚಾಣಕ್ಯನು ಜೀವಸಿದ್ಧಿಯನ್ನು ಹೊರಡಿಸಿದನು.) ಆದರೆ ಇಂದುಶರ್ಮನಿಗೆ ಕ್ಷಪಣಕ ವೇಷವನ್ನು ಹಾಕಿಸಿ ಕಳುಹಲು ಕಾರಣವೇನಿರಬಹುದೆಂದು ಯೋಚಿಸಿದರೆ, ಇಂದುಶರ್ಮನು ಬ್ರಾಹ್ಮಣಸನ್ಯಾಸವನ್ನು ತೆಗೆದುಕೊಂಡು ಪುನಃ ಗೃಹಸ್ಥಾಶ್ರಮಕ್ಕೆ ಪ್ರವೇಶಿಸಿದಲ್ಲಿ ಪತಿತನೆಂದು ಗಣಿಸಲ್ಪಡುವದರಿಂದ, ತತ್ಕಾಲಕ್ಕೆ ಭದಂತವೇಷವನ್ನು ಧರಿಸಿ, ಕಾರ್ಯಸಿದ್ಧಿಯಾದನಂತರ ಪೂರ್ವಾಶ್ರಮವನ್ನು ಪರಿಗ್ರಹಿಸುವುದಕ್ಕೆ ಅಭ್ಯಂತರವಿಲ್ಲದಿರಬೇಕೆಂಬುದೇ ಕಾರಣವೆಂದು ತೋರುವುದು. ಮತ್ತು ಕವಿಯು ಬ್ರಾಹ್ಮಣಮತಾಭಿಮಾನಿಯಾದುದರಿಂದ, ಪರಿವ್ರಾಜಕರು ಅಂತಹ ಅಕಾರ್ಯಗಳಲ್ಲಿ ಪ್ರವರ್ತಿಸರೆಂದು ತೋರಿಸುವುದಕ್ಕೆ ಇಂದುಶರ್ಮನಿಗೆ ಕ್ಷಪಣಕ ವೇಷವನ್ನು ಹಾಕಿಸಿರಬಹುದೇ ಹೊರತು, ಬ್ರಾಹ್ಮಣರಿಗೆ ಗೌರವವಿರಲಿಲ್ಲವಾದುದರಿಂದ ಜೀವಸಿದ್ಧಿಯು ಕ್ಷಪಣಕನಾದನೆಂದು ಹೇಳಲಾಗದು.

ಗುಪ್ತರಾಜರ ಕಾಲದಲ್ಲಿ ಕರ್ಮಮೀಮಾಂಸಾನುಯಾಯಿಗಳೇ ಪ್ರಬಲರಾಗಿ ಜೈನ-ಬೌದ್ಧ ಮತೀಯರನ್ನು ಹಿಂಸೆಪಡಿಸದಿದ್ದರೂ, ಅವರನ್ನು ಮೂಲೆಗೆ ಕೂಡಿಸಿದ್ದರೆಂಬುದಕ್ಕೆ ಪ್ರಮಾಣಗಳಿವೆ. ಚಕ್ರವರ್ತಿಗಳಾದ ಸಮುದ್ರಗುಪ್ತ, ಚಂದ್ರಗುಪ್ತ, ವಿಕ್ರಮಾದಿತ್ಯರು ಅಶ್ವಮೇಧ, ಬಹು-

ಸುವರ್ಣಪೌಂಡ್ರ ಇತ್ಯಾದಿ ಯಜ್ಞಗಳನ್ನು ಮಾಡಿದರೆಂದು ಶಾಸನಗಳಿಂದ ತಿಳಿದುಬರುತ್ತದೆ. ವಿದ್ಯಾರಣ್ಯರು ವೇದಭಾಷ್ಯಗಳನ್ನು ಬರೆದು ಹೇಗೆ ಹದಿನಾಲ್ಕನೆಯ ಶತಮಾನದಲ್ಲಿ ಸನಾತನ ಧರ್ಮಕ್ಕೆ ನವಶಕ್ತಿಯನ್ನು ಕೊಟ್ಟರೋ, ಹೀಗೆಯೇ ವಿಕ್ರಮಾದಿತ್ಯನ ಪ್ರೋತ್ಸಾಹದಿಂದ 'ಸ್ಕಂದ-ಸ್ವಾಮಿ' ಎಂಬಾತನು ಋಗ್ವೇದದ ಪ್ರಥಮಾಷ್ಟಕಕ್ಕೂ, ಬಹುಶಃ ಇದೇ ಕಾಲದವನಾದ ವನವಾಸಿಯ ಉದ್ಗೀಥಾಚಾರ್ಯನು ಋಗ್ವೇದದ ಹತ್ತನೆಯ ಮಂಡಲಕ್ಕೂ ಭಾಷ್ಯಗಳನ್ನು ಬರೆದು ನೂತನಚೈತನ್ಯವನ್ನುಂಟುಮಾಡಿದರು. ಇದುವರೆಗೆ ದೊರಕಿದ ವೇದಭಾಷ್ಯಗಳಲ್ಲಿ ಇವರದೇ ಅತ್ಯಂತ ಪ್ರಾಚೀನವಾದುದು. ಈ ಕಾಲದಲ್ಲಿ 'ಸ್ವಾಮಿನ್' ಎಂಬ ಬಿರುದು ಕರ್ಮಬ್ರಹ್ಮೋಪಾಸಕರ ಚಿಹ್ನೆಯಾಗಿದ್ದಿತು ಯಜ್ಞಸ್ವಾಮಿ, ವಿಷ್ಣುಸ್ವಾಮಿ, ಅಗ್ನಿ-ಸ್ವಾಮಿ ಇತ್ಯಾದಿ ಬ್ರಾಹ್ಮಣರಿಗೆ ಪರಿವ್ರಾಜಕಮಹಾರಾಜರು ದಾನಗಳನ್ನು ಕೊಟ್ಟರೆಂದು ಶಾಸನಗಳಿಂದ ತಿಳಿಯುಬರುವುದು. ಸುಮಾರು ಇದೇ ಕಾಲದಲ್ಲಿಯೇ ಜೈಮಿನಿಯ ಪೂರ್ವಮೀಮಾಂಸಾಸೂತ್ರಗಳಿಗೆ ಭಾಷ್ಯವನ್ನು ಬರೆದ ಶಬರಸ್ವಾಮಿ, ಪಕ್ಷಿಲಸ್ವಾಮಿ ಮುಂತಾದವರು, ತದನಂತರ ಪ್ರಭಾಕರ, ಕುಮಾರಿಲ, ಭವಭೂತಿ, ಉಮ್ವೇಕ ಇತ್ಯಾದಿಗಳೂ ಕರ್ಮವೇ ಮುಖ್ಯವೆಂದು ವಾದಿಸಿ ಬೌದ್ಧಮತವನ್ನು ಬಲಗುಂದುವಂತೆ ಮಾಡಿದರು.

ಹೀಗೆ ಕ್ರಿ. ಶ. ಮೂರನೆಯ ಶತಮಾನದಲ್ಲಿ ಪ್ರಾರಂಭವಾದ ನೂತನೋತ್ಸಾಹದಿಂದ ಅಖಂಡ ಭರತಖಂಡವೆಲ್ಲವೂ ಸನಾತನ ಧರ್ಮಭೂಮಿಯಾದುದೇ ಅಲ್ಲದೆ, ಅಗಸ್ತ್ಯಕಶ್ಯಪಾದಿ ಗೋತ್ರದವರಾದ ಬ್ರಾಹ್ಮಣರನೇಕರು ಸಮುದ್ರವನ್ನುಕೂಡ ದಾಟಿ, ಯವ (ಜಾವ) ಸುಮಾತ್ರ, ಬಲಿ, ಸೈಯಾಮ್, ಚೀಣ, ಜಪಾನ್ ದೇಶಗಳಲ್ಲಿ ಶೈವಮತವನ್ನು ಸ್ಥಾಪಿಸಿದರೆಂಬುದಕ್ಕೆ ಕೋಟ್ಯನುಕೋಟಿ ಪ್ರಮಾಣಗಳಿವೆ. ಮತ್ತು ಡಾ. ಎಲಿಯಟ್ ಸ್ಮಿತ್ ಎಂಬಾತನು ಅಮೆರಿಕಾ ದೇಶದಲ್ಲಿನ ಮೆಕ್ಸಿಕೋ ರಾಜ್ಯದ ಪ್ರಾಚೀನ ದೇವತಾವಿಗ್ರಹ, ಶಾಸನಗಳೇ ಮುಂತಾದ ಆಧಾರಗಳಿಂದ,

ಬ್ರಾಹ್ಮಣಸಂಸ್ಕೃತಿಯ ಪ್ರವಾಹವು ಸುಮಾರು ಕ್ರಿ. ಶ. ಮೂರನೆಯ ಶತಮಾನದಲ್ಲಿ ಹಿಂದೂಸ್ಥಾನದಿಂದ ಹೊರಟು, ಜಾವಾ, ಸುಮಾತ್ರ, ಸಿಲಿಬಿಸ್, ಫಿಜಿ, ಸಮೋವಾ, ಹಾವೈ ಮುಂತಾದ ಪೆಸಿಫಿಕ್ ಸಮುದ್ರದ ದ್ವೀಪಗಳ ಮಾರ್ಗವಾಗಿ ಹರಿದು, ಮೆಕ್ಸಿಕೋವನ್ನಾಕ್ರಮಿಸಿತೆಂದು ಅಭಿಪ್ರಾಯಪಟ್ಟಿರುವನು. (Illustrated London News, January 15th 1927.) ಇವುಗಳನ್ನೆಲ್ಲಾ ಪರಿಶೀಲಿಸಿದರೆ, ತೆಲಂಗರು ಹೇಳುವಂತೆ ಏಳನೆಯ ಶತಮಾನದ ವರೆಗೂ ಬೌದ್ಧಮತವು ಕ್ಷೀಣಿಸಿರಲಿಲ್ಲವೆಂಬುದೂ, ಬೌದ್ಧರು ಗೌರವಾರ್ಹರಾಗಿದ್ದರೆಂಬುದೂ ಗ್ರಾಹ್ಯವಲ್ಲ.

ಇತ್ಯಾದಿ ಕಾರಣಗಳಿಂದ ವಿಲ್ಸನ್, ಜೇಕೋಬಿ, ತೆಲಂಗ್ ಇವರ ಮತಗಳಾವುದೂ ಸಮರ್ಪಕವಾಗಿಲ್ಲ ಆದುದರಿಂದ ಈ ನಾಟಕದಲ್ಲಿ ಕಂಡುಬರುವ ವಿಷಯಗಳನ್ನೇ ಪ್ರಮಾಣವಾಗಿಟ್ಟುಕೊಂಡು ಕಾಲವನ್ನು ನಿರ್ಣಯಿಸಲು ಪ್ರಯತ್ನಪಡಬೇಕಾಗಿದೆ ವಿಶಾಖದತ್ತನು ಔತ್ತರೇಯನೇ, ಹಾಗೂ ಮಗಧದೇಶದವನೇ ಎಂಬುದಕ್ಕೆ ನಿದರ್ಶನಗಳಿವೆ. ಪಾಟಲೀಪುತ್ರದಲ್ಲಿನ ಸುಗಾಂಗಪ್ರಾಸಾದವನ್ನು ವರ್ಣಿಸಿರುವುದೇ ಅಲ್ಲದೆ, ಮೇಲೆ ಹೇಳಿದಂತೆ, ಪೂರ್ವದಲ್ಲಿ ಖಾಸಿಯ ಪರ್ವತಗಳು-ಬ್ರಹ್ಮಪುತ್ರನದಿಯೂ, ಪಶ್ಚಿಮದಲ್ಲಿ ಶತದ್ರುನದಿಯೂ ಮೇರೆಯಾಗುಳ್ಳ ದೇಶವು ಹೊರತು ಮಿಕ್ಕ ಭಾಗಗಳೆಲ್ಲವೂ ಮ್ಲೇಚ್ಛದೇಶವೆಂದು ಹೇಳಿರುವುದರಿಂದ, ವಿಶಾಖದತ್ತನು ಮಗಧದೇಶೀಯನೇ ಆಗಿರಬೇಕು. ಇದಕ್ಕೆ ಉಪಷ್ಟಂಭಕವಾಗಿ ಈ ನಾಟಕದಲ್ಲಿ ಲೋಕೋತ್ತರವಾದಿಯಾದ ಜೀವಸಿದ್ಧಿಯು ಮಿಕ್ಕ ಪಾತ್ರಗಳಂತೆ ಶೂರಸೇನಿ, ಮಹಾರಾಷ್ಟ್ರಿ, ಮತ್ತು ಪ್ರಾಕೃತ—ಇವುಗಳನ್ನು ಪಯೋಗಿಸದೆ, ಮಾಗಧಿ ಅರ್ಧಮಾಗಧಿಗಳಲ್ಲಿಯೇ ಸಂಭಾಷಣೆಯನ್ನು ಮಾಡುವನು. ಇದಕ್ಕನುಸಾರವಾಗಿ ಯುವಾನ್ ಚ್ವಾಂಗ್ ಎಂಬ ಬೌದ್ಧಪ್ರವಾಸಿಯು, ಮಗಧರಾಜ್ಯವು ಲೋಕೋತ್ತರವಾದಿಗಳ ತವರುಮನೆಯಾಗಿದ್ದಿತೆಂದೂ,

ಅಲ್ಲಿ ಆ ಸಂಘದ ಕೆಲವು ಸಾವಿರ ಭಿಕ್ಷುಗಳಿದ್ದರೆಂದೂ ಹೇಳಿರುವನು. ಆದುದರಿಂದ ಹಿಂದೆ ಸೂಚಿಸಿದಂತೆ ವಿಶಾಖದತ್ತನು ಕುಸುಮಪುರವನ್ನು ಚೆನ್ನಾಗಿ ಬಲ್ಲವನಾಗಿದ್ದನೆಂದು ತಿಳಿದುಬರುತ್ತದೆ.

ಮುದ್ರಾರಾಕ್ಷಸ ನಾಟಕದ ಭರತವಾಕ್ಯದಲ್ಲಿ:—

**ಶ್ಲೋ॥ ವಾರಾಹೀ ಮಾತ್ಮಯೋನೇ ಸ್ತನುಮವನ ವಿಧಾ ನಾಸ್ಥಿತಸ್ಯಾನುರೂಪಾಂ। ಯಸ್ಯ ಪ್ರಾಗ್ದಂತಕೋಟಿಂ ಪ್ರಳಯ ಪರಿಗತಾ ಶಿಶ್ರಿಯೇ ಭೂತಧಾತ್ರೀ॥ ಮ್ಲೇಚ್ಛೈರುದ್ವೇಜ್ಯಮಾನಾ ಭುಜಯುಗ ಮಧುನಾ ಸಂಶ್ರಿತಾ ರಾಜಮೂರ್ತೇಃ। ಸಶ್ರೀಮದ್ಬಂಧು ಭೃತ್ಯ ಶ್ಚಿರಮವತು ಮಹೀಂ ಪಾರ್ಥಿವ ಶ್ಚಂದ್ರಗುಪ್ತಃ॥**

ಎಂಬುದರಿಂದ « ಆಗ ಆಳುತ್ತಿದ್ದ ಚಂದ್ರಗುಪ್ತನ ಕಾಲದಲ್ಲಿ ಮ್ಲೇಚ್ಛರಿಂದ ಭೂಮಿಯು ಬಾಧಿಸಲ್ಪಡುತ್ತಿತ್ತು '' ಎಂದು ಅರ್ಥವಾಗುವುದು. ಇಲ್ಲಿ ಮ್ಲೇಚ್ಛರೆಂದರೆ, ಪಂಚಮಾಂಕದಲ್ಲಿ ಹೇಳಿದ ಚೀನ, ಯವನ, ಶಕ, ಹೂಣರನ್ನು ಗ್ರಹಿಸಬೇಕು. ಇವರಲ್ಲಿ ಯವನರು ಪಾಣಿನಿಯ ಕಾಲದಿಂದಲೂ (ಕ್ರಿ. ಪೂ. 7 ಶತಮಾನ) ಹಿಂದೂದೇಶದ ಸೀಮಾಸ್ಥಳಗಳಲ್ಲಿದ್ದರೆಂದು. (ಇಂದ್ರ, ವರುಣ, ಭವ, ಶರ್ವ, ರುದ್ರ, ಮೃಡ, ಹಿರಣ್ಯ, ಯವ, ಯವನ ಮಾತುಲಾಚಾರ್ಯಾಣಾ ಮಾನುಕ್. IV 1. 49) ಎಂಬ ಪಾಣಿನಿ ಸೂತ್ರದಿಂದ ತಿಳಿದುಬರುವುದು. ಚೀನರು ಕ್ರಿಸ್ತಪೂರ್ವ ಒಂದನೆಯ ಶತಮಾನದಲ್ಲಿಯೇ ಭರತಖಂಡದಲ್ಲಿ ಕಾಣಬರುವರು. ಆದುದರಿಂದ ನಮಗೆ ಕಾಲನಿರ್ಣಯಕ್ಕೆ ಶಕ, ಹೂಣರಿಂದಲೇ ಸಹಾಯವು ಆಗಬೇಕು. ಶಕರು ಕ್ರಿ. ಶ. ಒಂದನೆಯ ಶತಾಬ್ದದಲ್ಲಿಯೇ ಹಿಂದೂದೇಶಕ್ಕೆ ಬಂದು ಹಾಲಶಾತವಾಹನನಿಂದ ಜಯಿಸಲ್ಪಟ್ಟು ಶಾಲೀವಾಹನ ಶಕಾಂತ ಸಂವತ್ಸರಕ್ಕೆ ತಮ್ಮ ಹೆಸರನ್ನಿತ್ತು (Journal of the Mythic Society Vol.

XVII p. 334) ಕ್ರಮೇಣ ಕ್ಷತ್ರಪರೆಂಬ ಹೆಸರಿನಿಂದ ಮಧುರೆ, ಉಜ್ಜಯಿನಿಗಳಲ್ಲಿ ರಾಜ್ಯವನ್ನಾಳಿದರು. ಇವರಲ್ಲಿ ಕೊನೆಯವನಾದ ರುದ್ರ ಸಿಂಹನೆಂಬವನು ಚಂದ್ರಗುಪ್ತನ ರಾಣಿಯನ್ನು ಕಾಮಿಸಿ ಗುಪ್ತರ ಮೇಲೆ ದಂಡೆತ್ತಿಬರಲು, ಚಂದ್ರಗುಪ್ತನು ಸ್ತ್ರೀವೇಷವನ್ನುಧರಿಸಿ ಸ್ಕಂಧಾವಾರವನ್ನು ಪ್ರವೇಶಿಸಿ, ಶಕರಾಜನನ್ನು ಕೊಂದನೆಂದು ಬಾಣನ ಹರ್ಷಚರಿತೆಯಲ್ಲಿನ « ಅರಿಪುರೇಚ ಪರಕಳತ್ರ ಕಾಮುಕಂ ಕಾಮಿನೀವೇಷಗುಪ್ತಃ ಚಂದ್ರಗುಪ್ತಃ ಶಕಪತಿಮಶಾತಯತ್ '' ಎಂಬ ವಾಕ್ಯದಿಂದಲೂ, (ಬಹುಶಃ ವಿಶಾಖದತ್ತ ನಿಂದ ರಚಿಸಲ್ಪಟ್ಟ) ದೇವೀಚಂದ್ರಗುಪ್ತಾ ಎಂಬ ನಾಟಕದಲ್ಲಿನ « ಸ್ತ್ರೀವೇಷ ನಿಹ್ನುತಃ ಚಂದ್ರಗುಪ್ತಃ ಶತ್ರೋಃ ಸ್ಕಂಧಾವಾರ ಮರಿಪುರಂ ಶಕಪತಿ ವಧಾಯ ಅಗಮತ್ " ಎಂಬ ವಚನದಿಂದಲೂ ತಿಳಿದುಬರುವುದು. ಆ ಶಕಪತಿಯ ವಧೆಯು, ವಂಶನಾಶವೂ ಶಾಲಿವಾಹನಶಕ 310 ರ ಮೇಲೆ ಎರಡು-ಮೂರು ವರ್ಷಗಳಲ್ಲಿಯೇ ನಡೆದಿರಬೇಕು. ಕ್ಷತ್ರಪರ ನಾಣ್ಯಗಳು, ಶಾಸನಗಳು ಆ ವರ್ಷದ ಅನಂತರ ಒಂದೂ ಕಾಣಬರದೇ ಇರುವುದರಿಂದ ಇದನ್ನು ನಿಶ್ಚಯಿಸಬಹುದಾಗಿದೆ. ಆದಕಾರಣ ನಾಲ್ಕನೆಯ ಶತಮಾನ ದಲ್ಲಿಯೇ ನಿರ್ಮೂಲ ಮಾಡಲ್ಪಟ್ಟ ಶಕರು, ತೆಲಂಗರು ಹೇಳುವಂತೆ 7 ನೆಯ ಶತಮಾನದಲ್ಲಿ ಇದ್ದರೆಂಬುದು ಸಂಭವವಲ್ಲ.

ಹೂಣರು ಸುಮಾರು ಕ್ರಿ. ಶ. 450 ರಲ್ಲಿ ಇಂಡಿಯಾದೇಶಕ್ಕೆ ಬಂದ ರೆಂದು ಇದುವರೆಗಿನ ಅಭಿಪ್ರಾಯವಾಗಿದ್ದಿತು. ಸುಮಾರು ಕ್ರಿ. ಶ 400. ರಲ್ಲಿದ್ದ ಚಾಂದ್ರವ್ಯಾಕರಣಪ್ರಣೇತೃವಾದ ಚಂದ್ರಗೋಮಿಯು « ಅಜಯ ದ್ಗುಪ್ತೋ ಹೂಣಾನ್ " ಎಂಬ ಉದಾಹರಣೆಯನ್ನು ಕೊಟ್ಟಿರುವುದರಿಂದ ಆತನಿಗೆ ಮುಂಚೆಯೇ ಹೂಣರೂ ಗುಪ್ತರೂ ಹೋರಾಡುತ್ತಿದ್ದರೆಂಬುದು ವಿದಿತವಾಗಿದೆ. ಸುಮಾರು ಕ್ರಿ. ಶ. 390 ರಲ್ಲಿ ವಿಕ್ರಮಾದಿತ್ಯನ ಆಸ್ಥಾನ ದಲ್ಲಿದ್ದ ಕಾಳಿದಾಸನು ರಘುವಿನ ದಿಗ್ವಿಜಯವನ್ನು ವರ್ಣಿಸುವಾಗ ಸಿಂಧೂ ತೀರದಲ್ಲಿ ಹೂಣರಿದ್ದರೆಂದು ಹೇಳಿರುವನು. ಇದಲ್ಲದೆ ಜೇ. ಜೇ. ಮೋಡಿ

ಯವರು ಜೈನಾ ಚರಿತ್ರೆಗಳ ಆಧಾರದಿಂದ ಕ್ರಿ.ಶ. ಮೂರನೆಯ ಶತಮಾನದ ಆದಿಭಾಗದಲ್ಲಿಯೇ ಹೂಣರು ಹಿಂದೂದೇಶದ ಸರಹದ್ದಿನಲ್ಲಿ ಇದ್ದರೆಂದು ನಿರ್ಧರಿಸಿರುವರು. ಆದುದರಿಂದ ಚಂದ್ರಗುಪ್ತನ ಕಾಲದಲ್ಲಿ ಹೂಣರಿದ್ದರೆಂಬುದಕ್ಕೆ ಯಾವ ಅಭ್ಯಂತರವೂ ಇಲ್ಲ. ಆದರೆ ಹೂಣರು ಸ್ಕಾಂದಗುಪ್ತನ ಕಾಲದ ವರೆಗೂ (ಕ್ರಿ. ಶ. 450) ಒಗ್ಗಟ್ಟಿಲ್ಲದೆ ಆಗಾಗ ದಾಳಿ ಮಾಡುತ್ತಿದ್ದರೇ ಹೊರತು ತದನಂತರ ಯಶೋಧರ್ಮನ (490 A.D.) ಕಾಲದಲ್ಲಿ ಮಿಹಿರಕುಲ ತೋರಮಾನರ ಕೈಕೆಳಗೆ ಇದ್ದಷ್ಟು ಪ್ರಬಲರಾಗಿರಲಿಲ್ಲ. ಸ್ಕಾಂದಗುಪ್ತ, ಪುರುಗುಪ್ತ, ಯಶೋಧರ್ಮ ಇವರ ಶಾಸನಗಳಿಂದ ಹೂಣರ ಹಾವಳಿಯು ಎಷ್ಟು ಹೆಚ್ಚಾಗಿದ್ದಿತೆಂಬುದನ್ನು ತಿಳಿಯಬಹುದು. ಕ್ರಿ. ಶ. 450 ಕ್ಕೆ ಹಿಂದಣ ಸ್ಥಿತಿಯೇ "ಮ್ಲೇಚ್ಛೈರುದ್ವೇಜ್ಯಮಾನಾ" ಎಂಬುದನ್ನು ಸೂಚಿಸುವುದು. ಡಾ. ಶ್ಯಾಮಾಶಾಸ್ತ್ರಿಗಳು—'ಕಾಳಿದಾಸ ವಿಶಾಖದತ್ತರನ್ನು ಹೊರತು ಸಂಸ್ಕೃತ ಸಾಹಿತ್ಯದಲ್ಲಿ ಇನ್ನಾವ ಕವಿಯೂ ಹೂಣರ ಹೆಸರನ್ನು ಹೇಳಲಿಲ್ಲ' ಎಂಬುದು ಭ್ರಾಂತಿಜನ್ಯವಾದುದು. ಬಾಣನು ಶ್ರೀಹರ್ಷನ ತಂದೆಯನ್ನು "ಹೂಣಹರಿಣಕೇಸರಿ" ಎಂದು ಸಂಬೋಧಿಸಿರುವನು. ಆದರೆ ಶ್ರೀಹರ್ಷನ ಕಾಲದಲ್ಲಿ ಹೂಣರು ಬಹಳ ಪ್ರಬಲರಾಗಿದ್ದ ಕಾರಣ 'ಉದ್ವೇಜ್ಯಮಾನಾ' ಎಂಬುದು ಸಮಂಜಸವಾಗಿಲ್ಲ. ಇದನ್ನೆಲ್ಲವನ್ನೂ ಸೂಕ್ಷ್ಮದೃಷ್ಟಿಯಿಂದ ತರ್ಕಿಸಿ ನೋಡಿದಲ್ಲಿ, ಚಂದ್ರಗುಪ್ತನ ಕಾಲದಲ್ಲಿ ಶಕರಿನ್ನೂ ಜನರ ಸ್ಮರಣೆಯಲ್ಲಿದ್ದ ಮತ್ತು ಹೂಣರತ್ಯಂತ ಪ್ರಬಲರಾಗದ ಸಮಯದಲ್ಲಿ ಪಾಟಲೀಪುತ್ರ ನಾಶಕ್ಕೆ ಮುಂಚೆಯೇ (ಕ್ರಿ.ಶ. 472) ಈ ನಾಟಕವು ರಚಿಸಲ್ಪಟ್ಟಿರಬೇಕೆಂದು ವಿದಿತವಾಗದೇ ಇರದು.

ಈ ಗುಪ್ತ-ಚಂದ್ರಗುಪ್ತನ ಹೆಸರನ್ನೇ ವಿಶಾಖದತ್ತನು ಇನ್ನೊಂದೆಡೆಯಲ್ಲಿ ಸೂಚಿಸಿರುವನು. ನಾಲ್ಕನೆಯ ಅಂಕದಲ್ಲಿ—"ಕಲ್ಯಾಣ ಕುಲಧರಾಣಾಂ ದೇವಾನಾಮಿವ ಮನುಷ್ಯ ದೇವಾನಾಮ್, ದರ್ಶನಮಪಿ ದುರ್ಲಭಮಧನ್ಯೈಃ" ಎಂಬಲ್ಲಿ ಕಲ್ಯಾಣಕುಲಧರ, ಮತ್ತು ದೇವ, ಎಂಬ ಪದಗ

ಳಿಂದ ಚಂದ್ರಗುಪ್ತನೇ ನಿರ್ದೇಶಿಸಲ್ಪಟ್ಟಿರುವಂತೆ ತೋರುವುದು. 'ಶ್ರೀಃ' ಎಂಬುದು—ಕಲ್ಯಾಣ--ಎಂಬುದಕ್ಕೆ ಲಕ್ಷಣಾರ್ಥಕವಾದುದರಿಂದಲೂ, ಗುಪ್ತಶಕ 61 ರಲ್ಲಿನ ಒಂದು ಶಾಸನದಲ್ಲಿ "ಶ್ರೀಸಂಯುತಾನಾಂ ಗುಪ್ತಾನ್ವಯಃ'' ಎಂದಿರುವುದರಿಂದಲೂ, ಗುಪ್ತವಂಶಕ್ಕೆ ಕಲ್ಯಾಣಕುಲವೆಂಬುದು ಸಮಂಜಸವಾಗಿದೆ. ಮತ್ತು ಚಂದ್ರಗುಪ್ತನ ನಾಣ್ಯಗಳಲ್ಲಿಯೂ, ಸಾಂಚಿ ಶಾಸನಗಳಲ್ಲಿಯೂ ಆತನಿಗೆ 'ಶ್ರೀ ವಿಕ್ರಮ' 'ನರೇಂದ್ರಚಂದ್ರ' 'ದೇವಶ್ರೀಚಂದ್ರ' 'ದೇವರಾಜ' ಮುಂತಾದ ಬಿರುದುಗಳಿದ್ದವೆಂದು ತಿಳಿದುಬರುವುದರಿಂದಲೂ, ವಾಕಾಟಕ ರಾಣಿಯಾದ ಪ್ರಭಾವತಿಗುಪ್ತೆ ಯೆಂಬ ಚಂದ್ರಗುಪ್ತನ ಮಗಳು ತನ್ನ ತಂದೆಯನ್ನು 'ದೇವರಾಜ'ನೆಂದು ಸಂಬೋಧಿಸಿರುವುದರಿಂದಲೂ 'ದೇವ' ಎಂಬ ಪದದಿಂದ ಚಂದ್ರಗುಪ್ತನೇ ನಿರ್ದೇಶಿಸಲ್ಪಟ್ಟಿರುವನೆಂದು ಹೇಳಬಹುದಾಗಿದೆ.

ಈ ನಾಟಕದಲ್ಲಿ ಗುಪ್ತರಕಾಲದ ಸಮಾಜದ ಸ್ಥಿತಿಯೇ ಸೂಚಿಸಲ್ಪಟ್ಟಿದೆ. ಇಲ್ಲಿ ಹೇಳಲ್ಪಟ್ಟ ಅಧಿಕಾರಿಗಳ ಹೆಸರುಗಳು ಅರ್ಥಶಾಸ್ತ್ರದಲ್ಲಿ ಇರುವುದಕ್ಕಿಂತ ಭಿನ್ನವಾಗಿ, ಗುಪ್ತರಕಾಲದ ಯಾಜ್ಞವಲ್ಕ್ಯಸ್ಮೃತಿ, ನಾರದಸ್ಮೃತಿ, ಶಾಸನ-ಇವುಗಳಲ್ಲಿ ಹೇಳಿದಂತಿವೆ. ಕಾಲಪಾಶಕ, ದಂಡಪಾಶಕ, ಸರ್ವನಗರಶ್ರೇಷ್ಠಿ, ದುರ್ಗಪಾಲ, ಕುಮಾರ, ಅಧಿರಾಜ, ವಿಜಯಪಾಲಕ, ಗಜಾಧ್ಯಕ್ಷ, ಅಶ್ವಾಧ್ಯಕ್ಷ, ಮಹಾಪ್ರತೀಹಾರಿ, ಇತ್ಯಾದಿಗಳು ಕುಮಾರಾಮಾತ್ಯ, ಮಹಾದಂಡನಾಯಕ, ಭಟಾಶ್ವಪತಿ, ಉಪರಿಕ-ಮಹಾರಾಜ, ನಗರಶ್ರೇಷ್ಠಿ, ಸಾರ್ಥವಾಹ, ಕುಲನಿಗಮ, ದಂಡಪಾಶಾಧಿಕರಣ ಶ್ರೀ ಪರಮಭಟ್ಟಾರಕ ಪಾದೀಯ, ಕುಮಾರಾಮಾತ್ಯಾಧಿಕರಣ-ಎಂಬುದಾಗಿ ಬಸರಾಮುದ್ರೆಗಳಲ್ಲಿಯೂ, ರಾಜಸ್ಥಾನೀಯ, ವಿಷಯಪತಿ, ಭೋಗಪತಿ, ಕರಪತಿ, ಅಶ್ವಪತಿ, ವಣಿಕ್‌ಶ್ರೇಷ್ಠಿ, ಶರ್ಕಮಪಾಲ, ಕೋಟ್ಟಪಾಲ, ಘಟ್ಟಪಾಲ, ಪ್ರಾಂತಪಾಲ-ಇತ್ಯಾದಿಯಾದ ಅಷ್ಟಾದಶ ಪ್ರಕೃತಿಗಳು ತಾತ್ಕಾಲಿಕ ಇತರ ಶಾಸನಗಳಲ್ಲಿಯೂ ಹೇಳಲ್ಪಟ್ಟಿರುವುದ

ರಿಂದ ವಿಶಾಖದತ್ತನು ತನ್ನ ಕಾಲದ ರಾಜಕೀಯ ವರ್ಗವನ್ನೇ ಮೌರ್ಯ ಪ್ರಾಚೀನ ಚರಿತ್ರೆಯಲ್ಲಿ ಅನ್ವಯಿಸಿರುವನೆಂದು ನಿಶ್ಚಯಿಸಬಹುದಾಗಿದೆ.

ಈ ಕಾರಣಗಳಿಂದ ಅನ್ಯಮತಗಳು ಸಮರ್ಪಕವಾಗಿಲ್ಲವೆಂದೂ, ವಿಶಾಖ ದತ್ತನು ಗುಪ್ತ ಚಂದ್ರಗುಪ್ತನ ಕಾಲದವನಾಗಿರಬೇಕೆಂದೂ ತೀರ್ಮಾನಿಸಿದು ದಾಯಿತು. ಇನ್ನು ಇದಕ್ಕೆ ಪ್ರತಿಬಂಧಕಗಳಾದ ವಿಷಯಗಳಾವುವೂ ಈ ನಾಟಕದಲ್ಲಿ ಇಲ್ಲವೆಂದು ತೋರಿಸಬೇಕಾಗಿರುವುದು. ನಾಂದಿಯ ಶ್ಲೋಕದಲ್ಲಿ "ಶಿವನ ವಕ್ರೋಕ್ತಿಯು ನಿಮ್ಮನ್ನು ರಕ್ಷಿಸಲಿ" ಎಂಬುದರಿಂದ ಕವಿಯು ಭಾಮಹನ-'ವಕ್ರೋಕ್ತಿಃ ಕಾವ್ಯಜೀವಿತಮ್' ಎಂಬ ಮತವನ್ನೇ ಅನುಸರಿ ಸಿರುವನೆಂದು ಹೇಳಬಹುದಾಗಿದೆ. ಭರತನ 'ವಿಭಾವಾನುಭಾವ ವ್ಯಭಿಚಾರಿ ಭಾವ ಸಂಯೋಗಾದ್ರಸನಿಷ್ಪತ್ತಿಃ" ಎಂಬಮತವನ್ನು ಬಿಟ್ಟರೆ, ವಕ್ರೋಕ್ತಿ ಮತವೇ ಅತ್ಯಂತ ಪ್ರಾಚೀನವೆಂದು ಹೇಳಬೇಕು. ಭಾಮಹನು ಭಾರವಿ ಗಿಂತಲೂ ಪ್ರಾಚೀನನು. 'ದಂಡಿಗಿಂತಲೂ ಭಾಮಹನು ಆಧುನಿಕನು' ಎಂಬ ಡಾ. ಕೀತಿನ ಅಭಿಪ್ರಾಯವು ನಿರಾಧಾರವಾದುದು. ದಂಡಿಯ ಪ್ರಪಿತಾಮಹ ನಾದ ದಾಮೋದರನು ಭಾರವಿಯ ಸ್ನೇಹಿತನಾಗಿದ್ದನೆಂದು, ಭಾರವಿಯು, ಕಾಂಚಿಯ ಸಿಂಹವಿಷ್ಣು, ವಿಷ್ಣುವರ್ಧನ ಮತ್ತು ಗಂಗದುರ್ವಿನೀತರ ಸಮಕಾಲೀನನಾಗಿದ್ದನೆಂದೂ, ದಂಡಿಯ ಅವಂತಿಸುಂದರೀ ಕಥೆಯಿಂದ ತಿಳಿಯುವುದು. ಇದರಿಂದ ಈ ಸಿಂಹವಿಷ್ಣುವು ಭೀಮವರ್ಮನ ಅಣ್ಣ ನೆಂದೂ, ವಿಷ್ಣುವರ್ಧನನು ಕ್ರಿ. ಶ. 615 ರಲ್ಲಿ ವೆಂಗಿದೇಶಕ್ಕೆ ರಾಜನಾಗಿದ್ದ ವಿಷಮಸಿದ್ಧಿಯೆಂದೂ, ಆದುದರಿಂದ ಗಂಗರಾಜನಾದ ದುರ್ವಿನೀತನು ಈ ಕಾಲದಲ್ಲಿರಬೇಕೆಂದೂ ಊಹಿಸಿರುವುದು ಸಮರ್ಪಕವಾಗಿಲ್ಲ. ಕ್ರಿ. ಶ. 634 ರಲ್ಲಿ ಬರೆಯಲ್ಪಟ್ಟ ಐಹೊಳೆ ಶಾಸನದಲ್ಲಿ ರವಿಕೀರ್ತಿಯು ತಾನು ಕಾಳಿ ದಾಸ ಭಾರವಿಗಳಿಗೆ ಸಮಾನನೆಂದು ಹೇಳಿಕೊಂಡಿರುವುದರಿಂದ, ಕ್ರಿ. ಶ. 615 ರಿಂದ 636 ರ ಒಳಗಾಗಿ ಭಾರವಿಯು ಅನ್ಯಮತೀಯರಿಂದಲೂ, ಕಾಳಿ ದಾಸನಿಗೆ ಸಮಾನನೆಂಬ ಖ್ಯಾತಿಯನ್ನು ಹೊಂದಿದ್ದನೆಂಬುದನ್ನು ನಂಬ

ಲಾಗದು. ಏನಿಲ್ಲದಿದ್ದರೂ ಒಂದು ಶತಾಬ್ದವಾದರೂ ಕಳೆದಿರಬೇಕು. ಆದುದರಿಂದ ದಂಡಿಯು ಹೇಳುವ ಸಿಂಹವಿಷ್ಣುವು, ಕುಮಾರವಿಷ್ಣುವಿನ ತಮ್ಮನೂ, ಸಿಂಹಸೂರಿಯ "ಲೋಕವಿಭಾಗ'' ದಲ್ಲಿ ಹೇಳಲ್ಪಟ್ಟಿರುವವನೇ ಆಗಿರಬೇಕು. ಸಿಂಹಸೂರಿಯು ಈತನ ರಾಜ್ಯಭಾರದ 22 ನೆಯ ವರ್ಷವು ಶಾ. ಶ. 380 (ಕ್ರಿ. ಶ. 458) ಎಂದು ಹೇಳಿರುವನು.

ಶ್ಲೋ॥ ಸಂವತ್ಸರೇತು ದ್ವಾವಿಂಶೇ ಕಾಂಚೀಶ ಸ್ಸಿಂಹವರ್ಮಣಃ।
ಅಶೀತ್ಯಗ್ರೇ ಶಕಾಬ್ದಾನಾಂ ಸಿದ್ಧಮೇತಚ್ಛತತ್ರಯೇ॥

ಈ ಸಿಂಹವಿಷ್ಣುವಿನ ತಮ್ಮನಾದ ಯುವಮಹಾರಾಜ ವಿಷ್ಣುಗೋಪನೇ (ಇವನೇ ಬಹುಶಃ ಸಮುದ್ರಗುಪ್ತನಿಂದ ಜಯಿಸಲ್ಪಟ್ಟವನು) ವಿಷ್ಣುವರ್ಧನನಾಗಿರಬೇಕು. ಇದೇ ಕಾಲದಲ್ಲಿದ್ದ ಗಂಗರಾಜನಾದ ದುರ್ವಿನೀತನು ತನ್ನ ಶಾಸನಗಳಲ್ಲಿ "ಕಿರಾತಾರ್ಜುನೀಯ ಪಂಚದಶಸರ್ಗ ಟೀಕಾಕಾರಃ'' ಎಂದು ಹೇಳಿಕೊಂಡಿರುವುದು, ದಂಡಿಯು ಹೇಳುವುದಕ್ಕೆ ಉಪಷ್ಟಂಭಕವಾಗಿದೆ. ಆದುದರಿಂದ ಸುಮಾರು ಕ್ರಿ. ಶ. 436 ರಲ್ಲಿ ಭಾರವಿಯು ಇದ್ದನೆಂದು, ಈತನು ಭಾಮಹನನ್ನೇ ಅನುಸರಿಸಿರುವುದರಿಂದ, ಭಾಮಹನು ಪ್ರಾಯಃ ಕ್ರಿ.ಶ. ನಾಲ್ಕನೆಯ ಶತಮಾನದ ಅಂತ್ಯಭಾಗದಲ್ಲಿದ್ದನೆಂದೂ ನಿರ್ಣಯಿಸಬೇಕು. ಈ ಕಾರಣದಿಂದ ಒಂದುವೇಳೆ ವಿಶಾಖದತ್ತನು ವಕ್ರೋಕ್ತಿ ಮತವನ್ನು ಅವಲಂಬಿಸಿದ್ದನೆಂದು ಹೇಳಿದರೂ, ಚಂದ್ರಗುಪ್ತನ ಕಾಲದಲ್ಲಿದ್ದನೆಂಬುದಕ್ಕೆ ಯಾವ ಅಭ್ಯಂತರವೂ ಇಲ್ಲ.

ಪ್ರಥಮಾಂಕದಲ್ಲಿ "ಇಂದುಶರ್ಮನು ಔಶನಸ ನೀತಿಯಲ್ಲಿ ಪರಿಣತನಾಗಿದ್ದನು'' ಎಂದು ಚಾಣಕ್ಯನು ಹೇಳಿರುವನು. ಈಗ ಶುಕ್ರನೀತಿ ಎಂದು ಪ್ರಸಿದ್ಧವಾಗಿರುವ ಗ್ರಂಥವು 8 ನೆಯ ಶತಮಾನಕ್ಕೆ ಹಿಂದಣದಲ್ಲವೆಂದು ನಿಶ್ಚಯಿಸಲ್ಪಟ್ಟಿದೆ. ಆದರೆ ಈ ಔಶನಸ ನೀತಿಯು ಶುಕ್ರನೀತಿಯೇ ಎಂದು

ಹೇಳಲಾಗದು. ಕಾಳಿದಾಸನೂ (ಕ್ರಿ. ಶ. 390) ಒಂದು ಔಶನಸ ನೀತಿ ಯನ್ನುಲ್ಲೇಖಿಸಿರುವನು.

**ಶ್ಲೋ||** ಅಥ್ಯಾಪಿ ತಸ್ಯೋಶನಸಾಪಿ ನೀತಂ ಪ್ರಯುಕ್ತರಾಗಃ
ಪ್ರಣಿಧಿಃ ದ್ವಿಷಸ್ತೇ | ಕಸ್ಯಾರ್ಥ ಧರ್ಮೌ ವದ ಪೀಡ
ಯಾಮಿ ಸಿಂಧೋಸ್ತಟಾ ವೋಘ ಇವ ಪ್ರವೃದ್ಧಃ ||
(ಕುಮಾರಸಂಭವ III 6.)

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ (ಕ್ರಿ. ಪೂ 300) ಮಾನವ, ಬಾರ್ಹ-ಸ್ಪತ್ಯ, ಔಶನಸ, ಪಾರಾಶರ, ಆಂಭೀಯ ಮತಗಳೂ, ಭಾರದ್ವಾಜ, ಉಶನ, ವಿಶಾಲಾಕ್ಷ, ಪರಾಶರ, ಪಿಶುನ, ಕೌಣಪದಂತ, ವಾತವ್ಯಾಧಿ, ಬಾಹು-ದಂತೀಪುತ್ರ, ಕಾತ್ಯಾಯನ, ಕಣಿಕಭಾರದ್ವಾಜ, ದೀರ್ಘಚಾರಾಯಣ, ಘೋಟಮುಖ, ಕಿಂಜಲ್ಕ, ಪಿಶುನಪುತ್ರ ಇತ್ಯಾದಿಗಳ ಅಭಿಪ್ರಾಯಗಳೂ ಹೇಳಲ್ಪಟ್ಟಿರುವುದರಿಂದ ವಿಶಾಖದತ್ತನು ಹೇಳುವ ಔಶನಸ ನೀತಿಯು ಈ ಪ್ರಾಚೀನಗ್ರಂಥವಾಗಿರಬೇಕು.

ದ್ವಿತೀಯಾಂಕದಲ್ಲಿನ “ಪ್ರಾರಭ್ಯತೇ ನ ಖಲು” ಎಂಬ ಪದ್ಯವು ಭರ್ತೃಹರಿಯ ನೀತಿಶತಕದಲ್ಲಿಯೂ ಕಂಡುಬರುವುದು. ಶತಕ ಕರ್ತೃವಾದ ಭರ್ತೃಹರಿಯೇ ವಾಕ್ಯಪದೀಯವನ್ನು ಬರೆದವನೆಂದು ಅಂಗೀಕರಿಸಿದರೂ, ಶೃಂಗಾರಶತಕವೊಂದೇ ಸ್ವಕಪೋಲಕಲ್ಪಿತವೆಂದು, ನೀತಿಶತಕದಲ್ಲಿನ ಸುಭಾಷಿತಗಳು ಕಿಂವದಂತಿಯಾಗಿಯೂ, ಪ್ರಾಚೀನಗ್ರಂಥಗಳಲ್ಲಿಯೂ ಇದ್ದ ಉತ್ತಮಶ್ಲೋಕಗಳನ್ನು ಆರಿಸಿಕೊಂಡು ಭರ್ತೃಹರಿಯು ಕ್ರೋಡೀಕರಿಸಿರುವನೆಂದು, ಆಧುನಿಕ ಪಂಡಿತರ ಅಭಿಪ್ರಾಯವಾಗಿರುವುದರಿಂದ, ಸುಮಾರು ಕ್ರಿ. ಶ. 640 ರಲ್ಲಿದ್ದ ಈ ಕವಿಯು ಸುಪ್ರಸಿದ್ಧವಾದ ಮುದ್ರಾರಾಕ್ಷಸ ನಾಟಕದಿಂದ ಈ ಪದ್ಯವನ್ನಾರಿಸಿಕೊಂಡಿರಬಹುದು ಇಲ್ಲವೇ ಇಬ್ಬರು ಕವಿಗಳೂ ಗಾಥಾರೂಪವಾಗಿದ್ದ ಪ್ರಾಚೀನ ಪದ್ಯವನ್ನು ತಮ್ಮ ಗ್ರಂಥಗ

ಳಲ್ಲಿ ಸೇರಿಸಿಕೊಂಡಿರಬೇಕು. ಮುದ್ರಾರಾಕ್ಷಸದಲ್ಲಿನ ನಿಯಮಸಂದರ್ಭಗಳನ್ನು ನೋಡಿದರೆ, ಅದಕ್ಕೇ ಚೆನ್ನಾಗಿ ಅನ್ವಯಿಸುವುದೆಂದು ಕಾಣುವುದರಿಂದ ಭರ್ತೃಹರಿಯೇ ಈ ಪದ್ಯವನ್ನು ನಾಟಕದಿಂದ ಸಂಗ್ರಹಿಸಿರಬೇಕೆಂದು ನಮಗೆ ತೋರುವುದು.

ಚತುರ್ಥಾಂಕದಲ್ಲಿನ "ಅತ್ಯುಚ್ಛ್ರಿತೇ ಮಂತ್ರಿಣಿ ಪಾರ್ಥಿವೇಚ" ಎಂಬ ಪದ್ಯವು ಪಂಚತಂತ್ರದಲ್ಲಿಯೂ ಕಾಣಬರುವುದು. ರಾಜನೀತಿಬೋಧಕವಾದ ಈ ಗ್ರಂಥವು ಪಲ್ಲವೀ ಭಾಷೆಗೆ ಕ್ರಿ. ಶ. ಆರನೆಯ ಶತಾಬ್ದದ ಆದಿಭಾಗದಲ್ಲಿ ಭಾಷಾಂತರವಾಯಿತು, ಮತ್ತು ಕ್ರಿ. ಶ. ಮೂರನೆಯ ಶತಮಾನದ ಅಂತ್ಯದಲ್ಲಿ ಈ ಗ್ರಂಥವು ಬರೆಯಲ್ಪಟ್ಟಿರಬೇಕೆಂದು ನಿರ್ಧರಿಸಿರುವುದರಿಂದ, ನಾಲ್ಕನೆಯ ಶತಾಬ್ದದ ಅಂತ್ಯಭಾಗದಲ್ಲಿದ್ದ ವಿಶಾಖದತ್ತನು ಈ ಪದ್ಯವನ್ನು ಉದಾಹರಿಸಿರಬೇಕೆಂಬುದಕ್ಕೆ ಯಾವ ಅಭ್ಯಂತರವೂ ಇಲ್ಲ.

ಪಂಚಮಾಂಕದಲ್ಲಿ ಕ್ಷಪಣಕನು ಲೋಕೋತ್ತರ ಮಾರ್ಗವೇ ಉತ್ತಮವೆಂದು ಹೇಳಿರುವನು. ಇದು ಧುಂಡಿರಾಜನು ಹೇಳಿದಂತೆ ಜೀವದ ಊರ್ಧ್ವಗತಿಯನ್ನು ಸಿದ್ಧಾಂತಗೊಳಿಸುವ ಜೈನವಾದವಲ್ಲ. ಮಹಾಸಾಂಘಿಕರೂ ಮತ್ತು ಇವರ ಅನುಯಾಯಿಗಳೂ ಆದ ವೇತುಲ್ಯರೇ ಮೊದಲಾದವರು ಸ್ಥವೀರಮತಕ್ಕೆ ಪ್ರತಿಯಾಗಿ, ಬುದ್ಧನು ಅಮಾನುಷವ್ಯಕ್ತಿಯೆಂದು, ಲೋಕೋತ್ತರನೆಂದು, ಶಾಕ್ಯಮುನಿಯು ನಿರ್ಮಾಣಕಾಯನೇ ಹೊರತು ನಿಶ್ಚಯವಾಗಿಯೂ ಮಾಯಾದೇವೀಸುತನಲ್ಲವೆಂದೂ, ಅಯೋನಿಜನೆಂದೂ ಸಾಧಿಸುವರು. ಈ ಅಭಿಪ್ರಾಯವನ್ನೇ ಆಧಾರವಾಗಿಟ್ಟುಕೊಂಡು, ಕ್ರಿ. ಶ. ಒಂದನೆಯ ಶತಾಬ್ದದಲ್ಲಿ ನಾಗಾರ್ಜುನಾದಿಗಳು ತಮ್ಮ ಮಹಾಯಾನದಲ್ಲಿ, ನಿರ್ಮಾಣಕಾಯದ ಜೊತೆಗೆ ಸಂಭೋಗಕಾಯ, ಧರ್ಮಕಾಯಗಳನ್ನು ಸೇರಿಸಿ ತ್ರಿಕಾಯ ಮತವನ್ನು ಪ್ರತಿಪಾದಿ

ಸಿರುವರು. ಆದುದರಿಂದ ಇಲ್ಲಿ ಹೇಳಲ್ಪಟ್ಟ ಲೋಕೋತ್ತರಮಾರ್ಗವಾದವು ಕ್ರಿ. ಶ. ಒಂದನೆಯ ಶತಮಾನಕ್ಕೆ ಹಿಂದೆಯೇ ಇದ್ದಿತೆಂದು ಸ್ಪಷ್ಟವಾಗುವುದು.

ಮತ್ತು ಈ ನಾಟಕದಲ್ಲಿ ಚಂದ್ರನಿಗೆ ಬುಧನು ಮಿತ್ರನೆಂದೂ, ಕೇತುವು ಹಾನಿಕರನೆಂದೂ ಹೇಳಿರುವ ಮಾತ್ರಕ್ಕೇ ವರಾಹಮಿಹಿರನಿಂದೀಚೆಗೆ ವಿಶಾಖದತ್ತನು ಇದ್ದಿರಬೇಕೆಂದು ಹೇಳಲಾಗದು. ಕಾಳಿದಾಸನೂ ಚಂದ್ರ-ಬುಧರ ಸಂಯೋಗವು ಆಹ್ಲಾದಕರವೆಂದು ಹೇಳಿರುವನು. (ರಘುವಂಶ XIII 76) ಕೇತುವು ಮನುಷ್ಯರ ಫಲವನ್ನು ನಿರ್ಣಯಿಸುವನೆಂಬುದು ಪುಲಿಶನ ಸಿದ್ಧಾಂತವೆಂದು ಬಲ್ಲಾಳನ 'ಅದ್ಭುತಸಾಗರ' ದಲ್ಲಿ ಹೇಳಿದೆ. ಈ ಪುಲಿಶನು ಸುಮಾರು ಕ್ರಿ. ಶ. 300 ರಲ್ಲಿದ್ದ ಫಾಲ್ಸ್ ಆಫ್ ಅಲೆಕ್ಸಾಂಡ್ರಿಯ ಎಂಬವನೆಂದು ನಿರ್ಣಯಿಸಲ್ಪಟ್ಟಿರುವುದರಿಂದ ವರಾಹಮಿಹಿರನಿಗೆ ಪೂರ್ವವೇ ವಿಶಾಖದತ್ತನಿದ್ದನೆಂಬುದಕ್ಕೆ ಯಾವ ಅಭ್ಯಂತರವೂ ಇಲ್ಲ.

ಭರತವಾಕ್ಯದಲ್ಲಿ ಭೂವರಾಹ ಮೂರ್ತಿಯು ವರ್ಣಿಸಲ್ಪಟ್ಟಿರುವನು. ಮಿಹಿರಕುಲನು ಒಂದು ಸಾಮಾನ್ಯ ವರಾಹಮೂರ್ತಿಯನ್ನು ತನ್ನ ಪ್ರಥಮ ವರ್ಷದಲ್ಲಿ ಸ್ಥಾಪಿಸಿದನು. ಇನ್ನೂ ನೃವರಾಹ ಮೂರ್ತಿಗಳೂ ಇದೇ ಕಾಲದಲ್ಲಿ ಗುಪ್ತಚಕ್ರಾಧಿಪತ್ಯದಲ್ಲಿ ಪ್ರತಿಷ್ಠಿಸಲ್ಪಟ್ಟವೆಂದು ಶಾಸನಗಳಿಂದ ತಿಳಿದುಬರುವುದು. ಇಂತಹ ಆವುದೋ ಮೂರ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ವಿಶಾಖದತ್ತನು ಈ ಪದ್ಯವನ್ನು ಬರೆದಿರಬೇಕೆಂದು ತೋರುವುದು.

ಆ ಕಾಲದಲ್ಲಿ ದೇಶವು ಮ್ಲೇಚ್ಛರಿಂದ ಪೀಡಿಸಲ್ಪಡುತ್ತಿದ್ದುದರಿಂದ ಅನೇಕ ಸಾಮಂತರು, ಉಚ್ಛಕಲ್ಪ ಆಮ್ಲೋಡ ಡಭಾಲ ಮುಂತಾದ ರಾಜರಂತೆ ತಲೆಯೆತ್ತಿಕೊಂಡು ಕೆಲವು ಕಾಲ ಮಹಾರಾಜ ವೈಭವವನ್ನನುಭವಿಸಿ ಪುನಃ ಕ್ಷೀಣಪುಣ್ಯರಾಗುತ್ತಿದ್ದರು. ಇಂತವರಲ್ಲಿ ಪೃಥು ಅಥವಾ ಭಾಸ್ಕರದತ್ತನೂ ಒಬ್ಬನಾಗಿದ್ದನು. ವಟೇಶ್ವರದತ್ತನು ಮಾತ್ರ ಸಾಮಂ

ತನು; ಪೃಥುವಾದರೋ ಮಹಾರಾಜಪದಭಾಕ್. ಆದರೆ ವಿಶಾಖದತ್ತನಿಗೆ ಮಾತ್ರ ಯುವರಾಜ, ಕುಮಾರ ಎಂಬ ಯಾವ ಅಧಿಕಾರಚಿನ್ಹೆಯೂ ಇಲ್ಲ. ಆದುದರಿಂದ ಪೃಥುವು ಸಮುದ್ರಗುಪ್ತನ ನಂತರ ಸ್ವತಂತ್ರನಾಗಲು ಯತ್ನಿಸಿ ಚಂದ್ರಗುಪ್ತನಿಂದ ಸೋಲಿಸಲ್ಪಟ್ಟು, ಅಧಿಕಾರವನ್ನೆಲ್ಲಾ ಕಳೆದುಕೊಂಡನೆಂದು ತೋರುವುದು. ಮತ್ತು ಭರತವಾಕ್ಯದಲ್ಲಿ 'ಬಂಧುಭೃತ್ಯಸಹಿತನಾಗಿ ಚಂದ್ರಗುಪ್ತನು ಭೂಮಿಯನ್ನು ರಕ್ಷಿಸಲಿ' ಎಂದಿರುವುದರಿಂದ, ವಿಶಾಖದತ್ತನು ಚಂದ್ರಗುಪ್ತನ ಬಂಧುಭೃತ್ಯ ವರ್ಗದಲ್ಲಿ ಸೇರಿದ್ದನೆಂದು ಧ್ವನಿತವಾಗುವುದು.

ಹೀಗೆ ಚಂದ್ರಗುಪ್ತನ ಕೊನೆಯ ವರ್ಷವಾದ ಕ್ರಿ. ಶ. 415 ಕ್ಕೆ ಮುಂಚೆ, ಪಾಟಲೀಪುತ್ರ ನಾಶಕ್ಕೆ (ಕ್ರಿ. ಶ. 472) ಹಿಂದೆಯೇ, ಸುಮಾರು ಕ್ರಿ. ಶ. 388 ರಲ್ಲಿ ನಾಶಮಾಡಲ್ಪಟ್ಟ ಶಕರನ್ನೂ ಜನರ ಸ್ಮರಣೆಯಲ್ಲಿದ್ದಾಗ ಹೂಣರ ದಾಳಿಗಳಾಗಾಗ ನಡೆಯುತ್ತಿದ್ದ ಕಾಲದಲ್ಲಿ ಈ ನಾಟಕವು ಬರೆಯಲ್ಪಟ್ಟಿರಬೇಕೆಂದು ತೀರ್ಮಾನ ಮಾಡಿದುದಾಯಿತು. ಈ ನಾಟಕದಲ್ಲಿ ಹೇಳಲ್ಪಟ್ಟ ಜ್ಯೋತಿಷ ವಿಷಯಗಳಿಂದ ಯಾವ ವರ್ಷದಲ್ಲಿ ಬರೆಯಲ್ಪಟ್ಟಿತೆಂದು ನಿರ್ಧರಿಸಲು ಪ್ರಯತ್ನಪಟ್ಟರೆ, ಈ ಇಪ್ಪತ್ತೈದು ವರ್ಷಗಳೊಳಗೆ ಆಸನ್ನವಾದರೂ ಕಾಣದೇ ಹೋದ ಚಂದ್ರಗ್ರಹಣಗಳು, ಕ್ರಿ ಶ 391, 392, 395 396, 388 398, 399, 402, 403 406, 409, 410, 413 414, ಈ ವರ್ಷಗಳಲ್ಲಿ ಬಂದರೂ, ಭಾದ್ರಪದ ಮಾಸದಲ್ಲಿ ಬರುವುದಿಲ್ಲವಾದುದರಿಂದ, ಪ್ರಸ್ತಾವನೆಯಲ್ಲಿ ಹೇಳಲ್ಪಟ್ಟ ಚಂದ್ರಗ್ರಹಣವು ಕಾಣಿಸಿಯೇ ಇದ್ದು, ವಿಶಾಖದತ್ತನು ಕಥಾಸಂದರ್ಭಕ್ಕೋಸ್ಕರ ಆಸನ್ನವಾಗಿ ಬಿಟ್ಟು ಹೋಯಿತೆಂದು ಹೇಳಿರಬೇಕೆಂದು ನಿಶ್ಚಯಿಸಬೇಕಾಗುವುದು

ಇದಾದಬಳಿಕ ಕೌಮುದೀ ಮಹೋತ್ಸವವು ಆಶ್ವಯುಜ ಪೌರ್ಣಿಮೆಯ ದಿನ ನಡೆಯಬೇಕಾಗಿದ್ದಿತು. ಬಳಿಕ ಚಂದ್ರಗುಪ್ತನು ಚಾಣಕ್ಯನನ್ನಾಕ್ಷೇಪಿಸುತ್ತಿದ್ದಾಗ ವೈತಾಳಿಕರು ಶರದೃತುವನ್ನು, ವಿಷ್ಣುವು ಸರ್ಪ

ಶಯನದಿಂದೆದ್ದುದನ್ನೂ (ಎಂದರೆ ಪ್ರಬೋಧೋತ್ಸವ ಅಥವಾ ಉತ್ಥಾನ ದ್ವಾದಶಿಯನ್ನೂ) ವರ್ಣಿಸಿರುವರು. ಇದಾದ ಒಂದು ತಿಂಗಳ ಮೇಲೆ, ಎಂದರೆ ಮಾರ್ಗಶಿರ ಪೂರ್ಣಿಮೆಯ ದಿನ ರಾಕ್ಷಸನು ಯುದ್ಧಸನ್ನಾಹ ಮಾಡಿದನೆಂದು ಧುಂಡಿರಾಜನು ಹೇಳಿರುವುದು ಗ್ರಾಹ್ಯವಲ್ಲ. ರಾಕ್ಷಸನು ಕಾರ್ತಿಕ ಪೂರ್ಣಿಮೆಯಾದ ನಂತರ ಒಂದು ತಿಂಗಳ ವರೆಗೂ ಕಾಲಹರಣ ಮಾಡುತ್ತಿದ್ದನೆಂಬುದನ್ನು ನಂಬಲಾಗದು. ದ್ವಾದಶಿಯಾದ ಎರಡು-ಮೂರು ದಿನದಲ್ಲಿಯೇ ಕ್ಷಪಣಕನನ್ನು ಪ್ರಯಾಣಕ್ಕೆ ಶುಭದಿನವನ್ನು ಕೇಳಲು ಅವನು ಪೂರ್ಣಿಮೆಯ ದಿನವೇ ಪೂರ್ಣಚಂದ್ರೋದಯಾನಂತರ ದ್ವಿಸ್ವಭಾವವಾದ ಬುಧಲಗ್ನದಲ್ಲಿ ಹೊರಟರೆ ನಕ್ಷತ್ರ, ತಿಥಿ, ವಾರದೋಷಗಳಾವುವೂ ಇರುವುದಿಲ್ಲವೆಂದು ಹೇಳಿದನು. ಗುಪ್ತರ ಕಾಲದಲ್ಲಿ ಮಾಸಗಳು ಪೂರ್ಣಿಮಾಂತವಾಗಿ ಲೆಖ್ಖಿಸಲ್ಪಡುತ್ತಿದ್ದುವು. ಇದನ್ನೇ ಕಾಳಿದಾಸನು ಮೇಘಸಂದೇಶದಲ್ಲಿನ “ಶಾಪಾಂತೋ ಮೇ ಭುಜಗಶಯನಾ ದುತ್ಥಿತೇ ಶಾರ್ಙ್ಗಪಾಣೌ” ಎಂಬುದರಿಂದ ಸೂಚಿಸಿರುವನು. ಇದನ್ನೆಲ್ಲವನ್ನೂ ನೋಡಿದರೆ ವಿಶಾಖದತ್ತನು, ಚಂದ್ರಗುಪ್ತನಿಂದ ಶಕರು ನಿಶ್ಶೇಷವಾಗಿ ಜಯಿಸಲ್ಪಟ್ಟ ಕ್ರಿ. ಶ. 388 ನೆಯ ವರ್ಷದಲ್ಲಿಯೇ ಈ ನಾಟಕವನ್ನು ಬರೆದಿರಬೇಕೆಂದು ತೋರುವುದು. ಆವರ್ಷ ಭಾದ್ರಪದ ಪೂರ್ಣಿಮೆಯಲ್ಲಿ (ಸೆಪ್ಟೆಂಬರ್ 2 ರಲ್ಲಿ) ಆದ ಚಂದ್ರಗ್ರಹಣವೇ ನಾಂದಿಯಲ್ಲಿ ಸೂಚಿಸಲ್ಪಟ್ಟಿದೆ. ಕೌಮುದೀ ಮಹೋತ್ಸವವು ಅಕ್ಟೋಬರ್ 2 ಸೋಮವಾರವಾಗುತ್ತದೆ. ಉತ್ಥಾನ ದ್ವಾದಶಿಯು 28 ನೆಯ ಅಕ್ಟೋಬರ್ ಶನಿವಾರವೂ, ಪೂರ್ಣಿಮೆಯು 31ನೆಯ ಅಕ್ಟೋಬರ್ ಮಂಗಳವಾರವೂ ಆಗುವುದು. ಪ್ರಯಾಣಕ್ಕೆ ಮಂಗಳವಾರ, ಕೃತ್ತಿಕಾನಕ್ಷತ್ರ, ನಿಷಿದ್ಧವಾಗಿದ್ದರೂ, ಚಂದ್ರೋದಯಾನಂತರ ದ್ವಿಸ್ವಭಾವ ಲಗ್ನದಲ್ಲಿ ಪ್ರಯಾಣ ಮಾಡಿದರೆ ದೋಷ ಪರಿಹಾರವಾಗುವುದೆಂದು ಕ್ಷಪಣಕನು ಹೇಳುವನು. ‘ಇದಮಿತ್ಥಂ’ ಎಂದು ಹೇಳುವುದು ಸಾಹಸ ಕಾರ್ಯವೇ ಆದರೂ, ಮೇಲೆ ಹೇಳಿದ ಕಾರಣಗಳಿಂದ, ಆ ಕಾಲದಲ್ಲಿಯೇ

ಮುದ್ರಾರಾಕ್ಷಸ ನಾಟಕವು ರಚಿಸಲ್ಪಟ್ಟಿತೆಂಬುದಕ್ಕೆ ಯಾವ ಅಭ್ಯಂತರವೂ ಇಲ್ಲ.

ವಿಶಾಖದತ್ತನು ಮುದ್ರಾರಾಕ್ಷಸ, ದೇವೀಚಂದ್ರಗುಪ್ತಾ ಎಂಬ ನಾಟಕಗಳಲ್ಲದೇ "ಅಭಿಸಾರಿಕಾವಂಚಿತಕ" ಎಂಬ ನಾಟಕವನ್ನೂ ಬರೆದಿರುವನೆಂದು, ಭೋಜನ 'ಶೃಂಗಾರಪ್ರಕಾಶ'ದಿಂದ ತಿಳಿದುಬರುವುದು. "ಶ್ರೀ ವಿಶಾಖದೇವ ಕೃತೇ ಅಭಿಸಾರಿಕಾವಂಚಿತೇ, ವತ್ಸರಾಜಃ ಸಂಭಾವಿತ ಪುತ್ರವಧಾದ್ಯೈ ಪದ್ಮಾವತ್ಯೈ ಕ್ರುದ್ಧಃ ತದಾಭ್ಯಧಾತ್—

ಶ್ಲೋ || ಪ್ರದುಷ್ಯೋಗ್ರಗ್ರಾಹಾಂ ಸರಿತ ಮವಗಾಢ ಶ್ಯ್ರಮವಶಾ |
ದುಪಾಸೀನಃ ಶಾಖಾಂ ಫಲಕುಸುಮಲೋಭಾ ದ್ವಿಷತರೋಃ ||
ಘನಾವಿಶ್ರಾಭ್ಯರ್ಥೀ ಚ್ಯುತಪರಿಚಯಾಂ ಕ್ರೌರ್ಯನಿರತಾಂ |
ವಿಷಜ್ವಾಲಾಗರ್ಭಾಂ ಚಿರ ಮುರಗಕನ್ಯಾ ಮನುಸೃತಃ ||

(Vol II. p. 484)

ಈಚೆಗೆ ದೊರೆತ ಕೌಮುದೀ ಮಹೋತ್ಸವವೆಂಬ (ಸಮುದ್ರಗುಪ್ತನ ಕಾಲದಲ್ಲಿ ರಚಿಸಲ್ಪಟ್ಟ) ನಾಟಕಕ್ಕೂ, ಮುದ್ರಾರಾಕ್ಷಸಕ್ಕೂ ಸಾಮ್ಯಗಳು ಅನೇಕವಾಗಿರುವುದರಿಂದ ಈ ಎರಡೂ ಸಮಕಾಲಿಕಗಳೆಂದು ಊಹಿಸಬಹುದಾಗಿದೆ. (J. An. H. R. Society 1930. Bh. Or. R. Vol. XII. pt. 1.) ಇನ್ನೂ ಈ ಮುದ್ರಾರಾಕ್ಷಸ ನಾಟಕದ ವಿಷಯವಾಗಿ ಹೆಚ್ಚು ಸಂಗತಿಗಳನ್ನು ತಿಳಿಯಬೇಕಾದರೆ—ಜೇಕೋಬಿ—Vienna Oriental Journal II p. 212. ಧೃವ Vol 5. ಮತ್ತು Int. Ant. 1913 p. 65. His. Quarterly 1931. ನೋಡಬಹುದು.

ಇಂತಹ ಮಹಾಕವಿಯಿಂದ ರಚಿತವಾದ ಈ ಗ್ರಂಥವನ್ನು ಪರಿವರ್ತಿಸತೊಡಗಿದುದು ಸಾಹಸವೇ ಸರಿ. ಆದರೂ ಈ ಅನೋಘವಾದ

ಗ್ರಂಥದ ರಸಾಸ್ವಾದಾನಂದದಲ್ಲಿ ಕನ್ನಡಿಗರೂ ಭಾಗಿಗಳಾಗಲೆಂಬ ಉದ್ದೇಶ್ಯ ದಿಂದಲೂ, ಯಥಾಶಕ್ತಿ ದೇಶಭಾಷಾಸೇವೆಯನ್ನು ಮಾಡಬೇಕೆಂಬ ಕುತೂ ಹಲದಿಂದಲೂ ಸಾಧ್ಯವಾದ ಮಟ್ಟಿಗೂ ಅನ್ಯೂನಾನತಿರಿಕ್ತವಾಗಿ ಮೂಲ ಗ್ರಂಥದ ಸ್ವಾರಸ್ಯವು ಕೆಡದಂತೆ, ಸುಲಭಶೈಲಿಯುಳ್ಳ ಭಾಷೆಯಿಂದ ಕನ್ನಡಿಸಿರುವೆನು. ಈ ಉಪೋದ್ಘಾತದಲ್ಲಿ ಅನೇಕ ನೂತನ ವಿಮರ್ಶೆಗಳಿಂದ ಕೂಡಿದ 'ನಾಟಕರಚನಾಕಾಲನಿರ್ಣಯ' ಭಾಗವನ್ನು ಶೇಖರಿಸಿಕೊಟ್ಟ, ಮೈಸೂರು ಮಹಾರಾಜಾ ಕಾಲೇಜ್, ಮ|| ರಾ|| ಎಸ್. ಶ್ರೀಕಂಠಶಾಸ್ತ್ರಿ ಎಂ. ಎ., ಯವರಿಗೂ, ಈ ವಿಷಯವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಸಾಹ್ಯವನ್ನಿತ್ತ ಓರಿಯಂಟಲ್ ಲೈಬ್ರೇರಿ ರಿಟೈರ್ಡ್ ಕ್ಯೂರೇಟರ್ ಮ|| ರಾ|| ಮಹಾಮಹೋಪಾಧ್ಯಾಯ, ಡಾಕ್ಟರ್ ಶಾಮಶಾಸ್ತ್ರಿಗಳು ಬಿ. ಎ., ಪಿ. ಹೆಚ್. ಡಿ., ಯವರಿಗೂ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಮತ್ತು ರಾಜನೀತಿ, ಲೋಕವ್ಯವಹಾರ ಮುಂತಾದ ಪ್ರಾಪಂಚಿಕ ವಿಷಯಗಳಿಗೆ ನೆಲೆಮನೆಯೆನಿಸಿದ ಈ ಗ್ರಂಥಕ್ಕೆ ಭಾಷಾಭಿಮಾನಿಗಳಾದ ಕನ್ನಡಿಗ ಮಹಾಶಯರೆಲ್ಲರೂ ಉದಾರಾಶ್ರಯವನ್ನಿತ್ತು ನನ್ನ ಶ್ರಮವನ್ನು ಸಾರ್ಥಕಗೊಳಿಸುವರೆಂದು ಹಾರೈಸುತ್ತೇನೆ.

ಎಂ. ರಾಮಶೇಷಶಾಸ್ತ್ರಿ,

ಆಸ್ಥಾನ ಮಹಾವಿದ್ವಾನ್.

## — ಮುದ್ರಾರಾಕ್ಷಸನಾಟಕದ ಪೂರ್ವಕಥೆ —

ಕಲ್ಯಾದಿಯಲ್ಲಿ ಸರ್ವಾರ್ಥಸಿದ್ಧಿಯೆಂಬ ಚಂದ್ರವಂಶದ ರಾಜನಿದ್ದನು. ಆತನಿಗೆ ಕ್ಷತ್ರಿಯ ಕುಲದ ಸುನಂದೆ, ಶೂದ್ರಜಾತಿಯ ಮುರೆ, ಎಂಬ ಇಬ್ಬರು ಹೆಂಡಿರು. ಆತನ ರಾಜಧಾನಿಗೆ ಪಾಟಲೀಪುತ್ರ, ಪುಷ್ಪಪುರ, ಕುಸುಮಪುರ, ಪಾಟಲೀಪುರ ಎಂಬ ಹೆಸರುಗಳುಂಟು. ಆತನ ಮುಖ್ಯ ಮಂತ್ರಿಯೇ ಅಮಾತ್ಯರಾಕ್ಷಸನು. ಒಮ್ಮೆ ಸರ್ವಾರ್ಥಸಿದ್ಧಿಯು ತನ್ನ ಮನೆಗೆ ಅತಿಥಿಯಾಗಿ ಬಂದ ಸಾಧುವನ್ನು ಸತ್ಕರಿಸಿ ಆತನ ಪಾದೋದಕ ವನ್ನು ತನ್ನ ಪತ್ನಿಯರ ತಲೆಯಲ್ಲಿ ಪ್ರೋಕ್ಷಿಸಲು, ನಂದಮೌರ್ಯರ ಹಾನಿ ವೃದ್ಧಿಗಳಿಗೆ ಸೂಚಕವಾಗಿ ಸುನಂದೆಯ ತಲೆಯಲ್ಲಿ ಬಿದ್ದ ಒಂಭತ್ತು ಜಲ-ಬಿಂದುಗಳೂ ಸ್ವಲ್ಪಹೊತ್ತು ನಿಂತು ಜಾರಿಹೋದುವು. ಮುರೆಯ ತಲೆ ಯಲ್ಲಿ ಬಿದ್ದ ಒಂದು ಬಿಂದುವು ಚಲಿಸದೇ ನಿಂತಿತು. ತರುವಾಯ ಮುರೆಯ ಗರ್ಭದಲ್ಲಿ ಮೌರ್ಯನು, ಸುನಂದೆಯ ಗರ್ಭದಲ್ಲಿ ನವನಂದನರು ಜನಿಸಿ ವೃದ್ಧಿಯಾಗಲು, ರಾಜನು ಜ್ಯೇಷ್ಠನಂದನನಿಗೆ ರಾಜ್ಯಾಧಿಕಾರವನ್ನು, ಮೌರ್ಯನಿಗೆ ಸೇನಾಧಿಕಾರವನ್ನೂ ಕೊಟ್ಟು ತಮರತನಾದನು. ಮೌರ್ಯ ನಿಗೆ ನೂರುಮಂದಿ ಪುತ್ರರು; ಅವರಲ್ಲಿ ಜ್ಯೇಷ್ಠನೇ ಚಂದ್ರಗುಪ್ತನು. ದುರುಳರಾದ ನಂದರು ಅಸೂಯೆಗೊಂಡು ಮೌರ್ಯಪುತ್ರರೆಲ್ಲರನ್ನೂ ಮೋಸ ದಿಂದ ಸಂಹರಿಸಿ, ದೈವಬಲದಿಂದುಳಿದ ಚಂದ್ರಗುಪ್ತನನ್ನು ಕೊಲ್ಲಲು ಯತ್ನ ವಿಲ್ಲದೆ ಅನ್ನಸತ್ರಾಧಿಕಾರದಲ್ಲಿಟ್ಟರು.

ಇಂತಿರಲೊಂದುದಿನ ಚಂದ್ರಗುಪ್ತನು, ಅನ್ನಸತ್ರದ ಇದಿರಾಗಿ ಬರುತ್ತ ಒಂದು ಹುಲ್ಲುತೆಂಡೆಯನ್ನೆಡವಿ ಕೋಪದಿಂದ ಅದನ್ನು ನಿರ್ಮೂಲ ಗೊಳಿಸಿದ ಮಹಾತೇಜಸ್ವಿಯಾದ ಚಾಣಕ್ಯನೆಂಬ ಬ್ರಾಹ್ಮಣನನ್ನು ಕಂಡು,

ಅವನನ್ನು ಮರೆಹೊಕ್ಕು ತನ್ನ ಸಂಕಟವೆಲ್ಲವನ್ನೂ ಹೇಳಿಕೊಂಡನು. ಚಾಣ ಕ್ಯನು ಅವನಿಗೆ ನಂದರಾಜ್ಯವನ್ನು ಕೊಡಿಸಬೇಕೆಂದು ನಿಶ್ಚಯಿಸಿ, ನಂದರನ್ನು ಕೆರಳಿಸುವುದಕ್ಕಾಗಿ ಸತ್ರದಲ್ಲಿದ್ದ ರಾಜಾಸನದಲ್ಲಿ ಕುಳಿತುಕೊಂಡನು. ಅದ ರಂತೆಯೇ ಕಾಲಬದ್ಧರಾದ ನಂದರು ಕೆರಳಿ ಅವನನ್ನು ಆಸನದಿಂದ ತಳ್ಳಿಸಿ ದರು. ಕೂಡಲೇ ಚಾಣಕ್ಯನು ನಂದರನ್ನು ನಿರ್ಮೂಲಗೊಳಿಸುವೆನೆಂದು ಪ್ರತಿಜ್ಞೆಮಾಡಿ, ಚಂದ್ರಗುಪ್ತನನ್ನು ಕರೆದುಕೊಂಡು ಪರ್ವತೇಶ್ವರನ ಬಳಿಗೆ ಹೋಗಿ ಅರ್ಧರಾಜ್ಯವನ್ನು ಕೊಡಿಸುವಂತೆ ವಾಗ್ದಾನಮಾಡಿ, ಸೇನಾಸಮೇತ ನಾದ ಅವನೊಡನೆಬಂದು ಕುಸುಮಪುರವನ್ನು ಮುತ್ತಿದನು. ಅಮಾತ್ಯ ರಾಕ್ಷಸಾದಿಗಳ ತಂತ್ರಗಳಾವುವೂ ನಡೆಯದೆ ಚಾಣಕ್ಯನ ಉಪಾಯದಿಂದಲೆ ನವನಂದರೂ ಮಡಿದರು. ತರುವಾಯ ಅಮಾತ್ಯರಾಕ್ಷಸನು ಚಂದ್ರಗುಪ್ತ ನಾಶಕ್ಕಾಗಿ ವಿಷಕನ್ನೆಯನ್ನು ಕಳುಹಲು, ಅದನ್ನು ತಿಳಿದು ಚಾಣಕ್ಯನು ಅದೇ ವಿಷಕನ್ನೆಯಿಂದಲೇ ಪರ್ವತೇಶ್ವರನನ್ನು ಕೊಲ್ಲಿಸಿ, ಅವನ ಮಗನಾದ ಮಲಯಕೇತುವನ್ನೋಡಿಸಿ, ಪಾಟಲೀಪುತ್ರವನ್ನು ಸ್ವಾಧೀನಪಡಿಸಿ ಕೊಂಡನು.

ಬಳಿಕ ಅಮಾತ್ಯರಾಕ್ಷಸನು ತನ್ನ ತಂತ್ರಗಳೆಲ್ಲವೂ ವ್ಯರ್ಥವಾದು ದನ್ನು ತಿಳಿದು, ರಾಜ್ಯವನ್ನು ಪರರಪಾಲಾದರೂ ಮಾಡಿ ಚಂದ್ರಗುಪ್ತ ನನ್ನು ಧ್ವಂಸಗೊಳಿಸಬೇಕೆಂದು ನಿಶ್ಚಯಿಸಿಕೊಂಡು, ಪರ್ವತಪುತ್ರನಾದ ಮಲಯಕೇತುವಿನಲ್ಲಿ ಮುಖ್ಯಮಂತ್ರಿಯಾಗಿ ಸೇರಿ, ಚಂದ್ರಗುಪ್ತನ ಮೇಲೆ ಯುದ್ಧಕ್ಕೆ ಹೊರಡುವುದಕ್ಕಾಗಿ ಸಕಲಸೈನ್ಯಗಳನ್ನೂ ಸಿದ್ಧಪಡಿಸಿಕೊಳ್ಳು ತ್ತಿದ್ದನೆಂಬುದೇ ಪೂರ್ವಕಥೆಯು. ಮುಂದಣ ಕಥೆಯನ್ನು ಕವಿಯೇ ನಾಟಕರೂಪವಾಗಿ ಪ್ರಯೋಗಿಸುವುದರಿಂದ ಇಲ್ಲಿ ತಿಳುಹಿಸಬೇಕಾದುದಿಲ್ಲ.



# — ವಿ ಷ ಯ ಸೂ ಚಿ ಕೆ —



ಪ್ರಥಮಾಂಕದಲ್ಲಿ— ಚಾಣಕ್ಯನ ತಂತ್ರದಿಂದ ಚಂದ್ರಗುಪ್ತನಿಗೆ ನಂದರಾಜ್ಯಪ್ರಾಪ್ತಿಯು, ಆ ರಾಜ್ಯವನ್ನು ಸ್ಥಿರಗೊಳಿಸುವುದಕ್ಕೆ ರಾಕ್ಷಸನನ್ನು ಮಂತ್ರಿಯಾಗಿಡುವುದೇ ಮುಖ್ಯ ಕಾರ್ಯವೆಂದು ಯೋಚಿಸುವ ಚಾಣಕ್ಯನಿಗೆ, ಸಿದ್ಧಾರ್ಥಕನೆಂಬ ಚಾರನು ರಾಕ್ಷಸನ ಮುದ್ರಿಕೆಯನ್ನು ತಂದೊಪ್ಪಿಸುವುದು, ಚಾಣಕ್ಯನು ರಾಕ್ಷಸನನ್ನು ಮೋಸಗೊಳಿಸುವುದಕ್ಕಾಗಿ ಕಪಟಲೇಖದೊಡನೆ ಸಿದ್ಧಾರ್ಥಕನನ್ನು, ಭಾಗುರಾಯಣಾದಿಗಳನ್ನೂ ಕಳುಹಿಸುವುದು, ಮತ್ತು ಕಪಟವರ್ತಕರಿಂದ ಪರ್ವತೇಶ್ವರನ ಒಡವೆಗಳನ್ನು ರಾಕ್ಷಸನಲ್ಲಿ ವಿಕ್ರಯಮಾಡಿಸುವುದು,—ಎಂಬೀ ವೃತ್ತಾಂತವು ವರ್ಣಿಸಲ್ಪಡುವುದು.

ದ್ವಿತೀಯಾಂಕದಲ್ಲಿ— ಅಮಾತ್ಯ ರಾಕ್ಷಸನು ಚಂದ್ರಗುಪ್ತನನ್ನು ಕೊಲ್ಲಿಸುವುದಕ್ಕಾಗಿ ಅನೇಕ ತಂತ್ರಗಳನ್ನು ಮಾಡಿ, ದಾರುವರ್ಮ ಪ್ರಮುಖರನ್ನು ಕುಸುಮಪುರದಲ್ಲಿಟ್ಟು, ಮಲಯಕೇತುವಿನ ಬಳಿಯಲ್ಲಿ ಮಂತ್ರಿಯಾಗಿರುವಾಗ, ತನ್ನ ಪ್ರತಿನಿಧಿಯಾದ ವಿರಾಧಗುಪ್ತನಿಂದ ತಂತ್ರವೆಲ್ಲವೂ ವ್ಯರ್ಥವಾಯಿತೆಂದು ತಿಳಿದು ದುಃಖಿಸುವುದು, ಚಾಣಕ್ಯನಿಂದ ಆಜ್ಞಪ್ತನಾದ ಸಿದ್ಧಾರ್ಥಕನು, ಶೂಲಕ್ಕೆ ಏರಿಸಲ್ಪಡುತ್ತಿದ್ದ ಶಕಟದಾಸನನ್ನು ಬಿಡಿಸಿಕೊಂಡು ರಾಕ್ಷಸನ ಬಳಿಗೆ ಹೋಗಿ, ಸಂತುಷ್ಟನಾದ ಆತನಿಂದ ಬಹುಮಾನವನ್ನು ಪಡೆಯುವುದು-ಎಂಬ ಕಥೆಯು ನಿರೂಪಿಸಲ್ಪಡುವುದು.

ತೃತೀಯಾಂಕದಲ್ಲಿ—ಚಾಣಕ್ಯ ಚಂದ್ರಗುಪ್ತರಿಗೆ ವಿರೋಧವನ್ನು ಉಂಟುಮಾಡಬೇಕೆಂಬ ರಾಕ್ಷಸನ ಪ್ರಯತ್ನವನ್ನು ತಿಳಿದು ಸೂಕ್ಷ್ಮಬುದ್ಧಿಯಾದ ಚಾಣಕ್ಯನು ಅದರಿಂದಲೇ ರಾಕ್ಷಸನನ್ನು ಮೋಸಗೊಳಿಸಬೇಕೆಂದು

ಚಂದ್ರಗುಪ್ತನೊಡನೆ ಕಪಟ ಕಲಹವನ್ನು ಮಾಡಿ, ಮಂತ್ರಾಧಿಕಾರವನ್ನು ಬಿಡುವುದು, ಚಂದ್ರಗುಪ್ತನು ಆಸ್ಥಾನದಲ್ಲಿ ಚಾಣಕ್ಯನನ್ನು ತಿರಸ್ಕರಿಸಿ ರಾಕ್ಷಸನನ್ನು ಹೊಗಳಿ ಸ್ವತಂತ್ರನಾಗಿ ರಾಜ್ಯವನ್ನು ಆಳುವುದು—ಎಂಬ ಚರಿತ್ರೆಯು ಪ್ರತಿಪಾದಿತವಾಗಿರುವುದು.

ಚತುರ್ಥಾಂಕದಲ್ಲಿ—ರಾಕ್ಷಸನು ಚಾಣಕ್ಯ-ಚಂದ್ರಗುಪ್ತರ ಕಲಹವನ್ನು ಕೇಳಿ ಚಂದ್ರಗುಪ್ತನಮೇಲೆ ಯುದ್ಧಕ್ಕೆ ಸನ್ನದ್ಧನಾಗಲು, "ಸರಿಯಾದ ಕಾಲದಲ್ಲಿ ಮಲಯಕೇತು-ರಾಕ್ಷಸರಿಗೆ ವಿರೋಧವನ್ನುಂಟುಮಾಡಬೇಕು" ಎಂದು ಮೊದಲೇ ಚಾಣಕ್ಯನಿಂದ ನಿಯುಕ್ತನಾಗಿ, ಮಲಯಕೇತುವಿನ ಬಳಿಯಲ್ಲಿ ದ್ವಿತೀಯ ಮಂತ್ರಿಯಾಗಿದ್ದ ಭಾಗುರಾಯಣನು, ರಾಕ್ಷಸನ ವಾಕ್ಯಗಳಿಗೆ ದುರರ್ಥಗಳನ್ನು ಹೇಳಿ—"ಅವನು ಶತ್ರುಪಕ್ಷದವನು" ಎಂಬ ನಂಬಿಕೆಯನ್ನು ಹುಟ್ಟಿಸಿ ಮಲಯಕೇತುವನ್ನು ಮೋಸಗೊಳಿಸುವ ಚರಿತವು ಉಕ್ತವಾಗುವುದು.

ಪಂಚಮಾಂಕದಲ್ಲಿ— ಚಾಣಕ್ಯನ ಕಡೆಯವರಾದ ಸಿದ್ಧಾರ್ಥಕ ಭಾಗುರಾಯಣ ಜೀವಸಿದ್ಧಿಗಳು, ರಾಕ್ಷಸನನ್ನು ಮಲಯಕೇತುವಿನ ಬಳಿಯಿಂದ ಹೊರಡಿಸಬೇಕೆಂದೆಳಸಿ, ಅದಕ್ಕನುಸಾರವಾಗಿ "ನಿನ್ನ ತಂದೆಯನ್ನು ರಾಕ್ಷಸನು ಕೊಲ್ಲಿಸಿದನು" ಎಂದು ಹೇಳಿ ಕೃತ್ರಿಮ ಪತ್ರವನ್ನು, ಒಡವೆಗಳನ್ನೂ ಮಲಯಕೇತುವಿಗೆ ತೋರಿಸುವುದು, ವಂಚಿತನಾದ ಮಲಯಕೇತುವು ಕ್ರುದ್ಧನಾಗಿ ರಾಕ್ಷಸನನ್ನು ತನ್ನ ದೇಶದಿಂದ ಹೋಡಿಸುವುದಲ್ಲದೆ ತನಗೆ ಆಪ್ತರಾದ ಐದುಮಂದಿ ರಾಜರನ್ನೂ ಕೊಲ್ಲಿಸುವುದು— ಎಂಬೀ ಸಂಗತಿಯು ಕಥಿತವಾಗಿರುವುದು.

ಷಷ್ಠಾಂಕದಲ್ಲಿ—ಮಲಯಕೇತುವಿನಿಂದ ತಿರಸ್ಕೃತನಾದ ರಾಕ್ಷಸನು ಎಲ್ಲಿಗಾದರೂ ಹೋಗಬೇಕೆಂದು ಯೋಚಿಸುತ್ತಿರುವಾಗ ಚಾಣಕ್ಯ

ಪ್ರೇರಿತನಾದ ಉದುಂಬರನೆಂಬವನು ರಾಕ್ಷಸನನ್ನು ಕುಸುಮಪುರದ ಜೀರ್ಣೋದ್ಯಾನಕ್ಕೆ ಕರೆತರುವುದು—ಅಲ್ಲಿ ರಾಕ್ಷಸನು ಚಂದನದಾಸನನ್ನು ಶೂಲಕ್ಕೆ ಹಾಕುವರೆಂಬ ಅಪ್ರಿಯವಾಕ್ಯವನ್ನು ಸಿದ್ಧಾರ್ಥಕನಿಂದ ಕೇಳುವುದು—ತನ್ನ ಶರೀರವನ್ನಾದರೂ ಪರಾಧೀನಮಾಡಿ ಮಿತ್ರನನ್ನು ಬದುಕಿಸಬೇಕೆಂದು ನಿಶ್ಚಯಿಸುವುದು-ಎಂದೀ ಭಾಗವು ಉದ್ಧೃತವಾಗಿರುವುದು.

ಸಪ್ತಮಾಂಕದಲ್ಲಿ—ಚಾಣಕ್ಯನು ತನ್ನ ತಂತ್ರಬಲದಿಂದ ಮಲಯಕೇತು-ರಾಕ್ಷಸರಿಗೆ ಭೇದವನ್ನು ಕಲ್ಪಿಸಿ ಚಂದನದಾಸನ ಪ್ರಾಣರಕ್ಷಣೆಗಾಗಿ ತನ್ನ ಬಳಿಗೆ ಬಂದ ಅಮಾತ್ಯನನ್ನು ಚಂದ್ರಗುಪ್ತನ ಸಾಚಿವ್ಯದಲ್ಲಿಟ್ಟು ಪ್ರತಿಜ್ಞೆಯನ್ನು ಪೂರೈಸುವುದು, ಚಂದ್ರಗುಪ್ತರಾಜನು ರಾಕ್ಷಸನು ಮಂತ್ರಿಪದಕ್ಕೆ ಬಂದ ಸಂತೋಷದಿಂದ ರಾಕ್ಷಸನ ಇಷ್ಟಪ್ರಕಾರ ಮಲಯಕೇತುವಿಗೆ ಪಿತೃವಾದ ರಾಜ್ಯವನ್ನು ಕೊಟ್ಟು ಅನುಗ್ರಹಿಸುವುದು— ಎಂಬ ವಿಷಯವು ಸ್ಥಾಪಿತವಾಗಿರುವುದು.



# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 11 | 13 | ನೂಲ್ಮೆಯಿಂದೆ | ನೊಲ್ಮೆಯಿಂದೆ |
| 15 | 18 | ಗೃಹವೇಶ | ಗೃಹಪ್ರವೇಶ |
| 47 | 23 | ಚಾಣವಟು | ಚಾಣಕ್ಯವಟು |
| 59 | 7 | ಪುಲ್ಲುಪೊಲ್ | ಪುಲ್ಲುವೊಲ್ |
| 61 | 7 | ಆರ್ಯನ | ಆರ್ಯನು |
| 63 | 19 | ಇಂತಿಷ | ಇಂತಹ |
| 64 | 9 | ಉಜ್ಟಲಿತ | ಉಜ್ವಲಿತ |
| 66 | 17 | ಇವೇ ಅರ | ಇವೇ ಅವರ |
| 85 | 12 | ಅಂಬಜಗಳ್ವ | ಅಂಬುಜಗಳ್ವ |
| 105 | 2 | ಕುಮಾರನನಾಜ್ಞೆ | ಕುಮಾರನಾಜ್ಞೆ |
| 107 | 20 | ನೀನಿವೆ | ನೀನೀವೆ |
| 111 | 8 | ಆಗಲಿ | ಅಗಲಿ |
| 115 | 13 | ಪುರುಷಕಾಲ | ಪುರುಷಕಾರ |
| 118 | 20 | ಶಯುನ್ನು | ಶಯೂವನ್ನು |

ಕರ್ಣಾಟಕ

# ಮುದ್ರಾರಾಕ್ಷಸ ನಾಟಕಂ.

## ಪ್ರಥಮಾಂಕಂ.

ವೃತ್ತಂ॥ ಇವಳಾವಳ್ ನಿನ್ನಶೀರ್ಷಸ್ಥಿತೆ? ಶಶಿಕಲೆ, ಯೇನೀಕೆ
ಗೀನಾಮವೋ? ನಿ। ಕ್ಕುವ ಮಾದಂ ಬಲ್ಲೊಡಂ ನೀಂ
ಮರೆಯುಲಿದ ನದೇಂ ಕಾರಣಂ? ನಾರಿಯಂ ಕೇ॥ಳುವೆ
ನೀಶೀತಾಂಶು ವಲ್ತಲ್ಲದಿರೆ ವಿಜಯೆ ತಾಂಪೇಳಲೆಂ ದಾ
ಯೆರ್ಯಂ ಬೇ। ಳವೆ ಗೆಯ್ವಾಗಂಗೆಯಂ ಗೋಪಿಸಿದ
ಹರನ ವಕ್ರೋಕ್ತಿ ಪೋಷಿಕ್ಕೆ ನಿಮ್ಮಂ ॥

ಮತ್ತಂ-ವೃತ್ತಂ॥ ಧರೆಯೊಳ್ ತನ್ನಿಚ್ಚೆಯಿಂ ದಿಂಕಿಡ ದಳಿವಿಳಿ
ಯಂ ಕಾಯ್ದು ಮೂಲೋಕಕೆಲ್ಲಂ । ಪಿರಿದಾದಾ
ತೋಳ್ಗಳಂ ಕುರ್ಗಿಸು ತಡಿಗಡಿಗಂ ಹಸ್ತವಿಕ್ಷೇಪಮಂ
ಗೆ। ಯ್ಯುದ್ರಿಗಣ್ಣಿಂ ಲಕ್ಷ್ಯಮಂ ವೀಕ್ಷಿಸೆ ದಹಿಸುವು
ದೆಂದಳ್ಕುತಾಧಾರರೋಧಂ। ದೊರೆವೆ ತ್ತುದ್ವೇಗಮಂ
ಸಾರ್ದ ಭವನ ನಟನಂ ನಾಡೆ ರಕ್ಷಿಕ್ಕೆ ನಿಮ್ಮಂ॥

( ನಾಂದ್ಯಂತದಲ್ಲಿ ಸೂತ್ರಧಾರಂ ಪ್ರವೇಶಿಸಿ )

ಸಾಕು ಸಾಕು, ಬಹಳ ಮಾತಿನಿಂದೇನು ? " ಸಾಮಂತ ನಟೇಶ್ವರ
ದತ್ತಪೌತ್ರನು, ಮಹಾರಾಜ ಬಿರುದನ್ನು ಪಡೆದ ಪೃಥುವಿನ ಕುಮಾರನು

ಆದ ವಿಶಾಖದತ್ತಕವಿಯಿಂದ ನೂತನವಾಗಿ ವಿರಚಿತವಾದ ಮುದ್ರಾರಾಕ್ಷಸ ವೆಂಬ ನಾಟಕವನ್ನು ಈಗತಾನೇ ಕರ್ಣಾಟಕ ಭಾಷೆಯಲ್ಲಿ—

ಕಂದಂ || ಅಸದೃಶ ವಿದ್ಯಾವೈಭವ |
ಲಸದಭಿನವ ಕಾಳಿದಾಸಮುಖ ಕವಿರತ್ನೋ ||
ಲ್ಲಸ ದುರು ವೆಲ್ಲಾಲ ಸುವಂ |
ಶಸಮುದ್ಭವ ಸಾಂಬಸೂರಿವರತನುಜಾತಂ ||

ಕಂ || ನಾಲ್ವಡಿ ಕೃಷ್ಣಮಹೀಂದ್ರನ |
ಚೆಲ್ವೆನಿಪಾಸ್ಥಾನದೊಳ್ ಮಹಾವಿದ್ವಾಂಸಂ ||
ಸಲ್ಲಾಲಿತ ಕವಿತಾ ವಿಭ |
ವೋಲ್ಲಸಿತಂ ರಾಮಶೇಷಕವಿ ವಿರಚಿಸಿಹಂ ||

ಆ ನಾಟಕವನ್ನು ಅಭಿನಯಿಸಿ ತೋರಿಸಬೇಕು'' ಎಂದು ನಾನು
ಸಭೆಯವರಿಂದ ಆಜ್ಞಪ್ತನಾಗಿರುವೆನು.

ಕಾವ್ಯರಸಜ್ಞರಾದ ಸಭೆಯವರಲ್ಲಿ ಅಭಿನಯಿಸಿ ತೋರಿಸುವ ನನಗೂ ಸಂತೋಷವುಂಟಾಗುವುದೆಂಬುದು ದಿಟವೇ ಸರಿ; ಏಕೆಂದರೆ—

ಕಂ|| ತಿಳಿವಿಲ್ಲದ ಗಾವಿಲನುಂ |
ಬೆಳಸಿನ ನೆಲದಲ್ಲಿ ಬೀಜವಿಡಲದು ಬೆಳೆಗುಂ ||
ಕಳವುಂ ಕವಲೊಡೆಯೆ ಕೃಷೀ |
ವಳನ ಗುಣಂಗಳ ನದೇ ನಪೇಕ್ಷಿಸ ದಲ್ತೆ! ||

ಆದುದರಿಂದ ಈಗ ಮನೆಗೆ ಹೋಗಿ ಮಡದಿಯನ್ನು ಕರೆದು ಗೃಹಜನ ದೊಡನೆ ಸಂಗೀತವನ್ನು ಪಕ್ರಮಿಸುವೆನು. (ಎಂದು ತೆರೆಯ ಕಡೆ ನಡೆದು ನೋಡಿ)

ಇದೇ ನಮ್ಮ ಮನೆಯು, ಒಳಪುಗುವೆನು (ಎಂದು ಮನೆಗೆಹೋಗಿ ನೋಡಿದಂತೆ ನಟಿಸಿ) ಓಹೋ! ಇದೇನು? ನಮ್ಮ ಮನೆಯಲ್ಲಿ ದೊಡ್ಡ ಹಬ್ಬವು ನಡೆಯುವಂತೆ ತೋರುವುದು. ಪರಿಜನರೆಲ್ಲರೂ ತಂತಮ್ಮ ಕೆಲಸಗಳಲ್ಲಿ ಬಹಳ ಸಡಗರಗೊಳ್ಳು ತ್ತಿರುವರು. ಹಾಗೆಯೇ ಸರಿ.

ಕಂ|| ಇವಳಿದೊ ಜಲಮಂ ತಂದಪ |
ಳಿವಳಿದೊ ಪೂಮಾಲೆಗಟ್ಟುವಳ್ ಚಂದನಮಂ ||
ಇವಳರೆವಳ್ ಹುಂಕೃತದಿಂ |
ದಿವಳಿವಳುಂ ಮುಸಲಪಾತರವನನುಕರಿಪರ್ ||

ಆಗಲಿ ನನ್ನ ಮಡದಿಯನ್ನು ಕರೆದು ಕೇಳುವೆನು.

(ಎಂದು ಕರೆಯುತಡೆ ನೋಡಿ)

ಕಂ|| ಸ್ಥಿತಿಹೇತುವೆನಿಪ ವರ್ಗ |
ತ್ರಿತಯಕೆ ಸಾಧಿಕೆ ಯುಪಾಯನಿಲಯೆ! ಗುಣೋದ್ಭಾ
ಸಿತೆ! ಕಾರ್ಯಾಚಾರ್ಯಾಳಿ! ಸಂ |
ಮತೆ! ಮದ್ಗೃಹ ನೀತಿವಿದ್ಯೆ ಬೇಗನೆ ಬಾರಾ! ||

ನಟಿ—(ಪ್ರವೇಶಿಸಿ) ಆರ್ಯನೆ! ಇದೊ ಬಂದೆನು. ಅಣತಿಯಿತ್ತು ನನ್ನನ್ನು ಅನುಗ್ರಹಿಸಬೇಕು

ಸೂತ್ರಧಾರ—ಆರ್ಯೆ! ಅಣತಿಯಾವುದಂತಿರಲಿ, ಈಗ ನಮ್ಮ ಕುಟುಂಬವನ್ನನು ಗ್ರಹಿಸುವುದಕ್ಕಾಗಿ ನೀನೇ ಪೂಜ್ಯರಾದ ಬ್ರಾಹ್ಮಣರನ್ನು ಭೋಜನಕ್ಕೆ ಕರೆದಿರುವೆಯಾ? ಅಥವಾ ನಂಟರಿಷ್ಟರಾದ ಅತಿಥಿ ಗಳಾರಾದರೂ ಬಂದಿರುವರೆ? ಈ ಹಬ್ಬದಡಿಗೆಯು ಏಕೆ ಪ್ರಾರಂಭಿಸಲ್ಪಟ್ಟಿರುವುದು? ಹೇಳು.

ನಟಿ—ಆರ್ಯನೆ! ನಾನೇ ಪೂಜ್ಯರಾದ ಬ್ರಾಹ್ಮಣರನ್ನು ಭೋಜನಕ್ಕೆ ಕರೆದಿರುವೆನು.

ಸೂ—ಆರ್ಯೆ! ಕಾರಣವೇನು? ಹೇಳು.

ನ—ಭಗವಂತನಾದ ಚಂದ್ರನಿಗೆ ಗ್ರಹಣವಾಗುವುದಷ್ಟೆ!

ಸೂ—ಆರ್ಯೆ! ಹೀಗೆ ಹೇಳಿದವರಾರು?

ನ—ಹೀಗೆಯೇ ಪಟ್ಟಣಿಗರೆಲ್ಲರೂ ಹೇಳಿಕೊಳ್ಳುತ್ತಿರುವರು.

ಸೂ—ಆರ್ಯೆ! ನಾನು ಅರವತ್ತುನಾಲ್ಕಂಗಗಳುಳ್ಳ ಜ್ಯೋತಿಶ್ಶಾಸ್ತ್ರದಲ್ಲಿ ಬಹಳ ಶ್ರಮಮಾಡಿರುವೆನು. ಆದುದರಿಂದ ಬ್ರಾಹ್ಮಣರಿಗಾಗಿ ಅಡಿಗೆಯೇನೋ ಆಗಲಿ. ಚಂದ್ರಗ್ರಹಣವಿಷಯದಲ್ಲಿಯಾದರೆ ಯಾರೋ ನಿನ್ನನ್ನು ಮೋಸಗೊಳಿಸಿರುವರು. ನೋಡು.

ಕಂ॥ ಖಲಕೇತುಗ್ರಹವಿಶಾಗಳ್ ।
ಛಲದಿಂದ ಸಮಗ್ರಮಂಡಲದ ಚಂದ್ರಮನಂ ॥
ಲಲಿತಾಂಗಿ! ಪಳಿಯಲೆಳಸುಗುಂ ।
(ತೆರೆಯಲ್ಲಿ) ಅಹ! ನಾನಿರಲದಾರು?

ಸೂ— ಬಲವಿಂದಂ ಬುಧನ ಯೋಗ ಮಿವನಂ ಪೊರೆಗುಂ॥

ನ—ಆರ್ಯನೆ! ಈತನಾವನು? ಭೂತಲವಾಸಿಯಾದರೂ ಗ್ರಹಣವಾಗದಂತೆ ಚಂದ್ರನನ್ನು ಕಾಪಾಡಲೆಳಸುವನು.

ಸೂ—ಅದುದು ದಿಟ, ನಾನೂ ತಿಳಿಯಲಿಲ್ಲ. ಮರಳಿ ಹೇಳ ಸ್ವರದಿಂದ ಗುರ್ತು ಹಿಡಿಯುವೆನು. (ಎಂದು ಖಲಕೇತುಗ್ರಹವಿಶಾಗಳ್ ಎಂದು ಹೇಳುವನು).

(ತೆರೆಯಲ್ಲಿ) ಅಹ! ನಾನಿರಲದಾರು? ಚಂದ್ರಗುಪ್ತನನ್ನು ತಿರಸ್ಕರಿಸಲೆಳಸುವನು.

ಸೂ—ಆರ್ಯೆ! ತಿಳಿಯಿತು, ಕೌಟಿಲ್ಯನು.

ನ—(ಭಯವನ್ನು ನಟಿಸುವಳು).

ಸೂ-ವೃ॥ ಆವಂ ಕೋಪಾಗ್ನಿಯಿಂದಂ ಬಿಡದುರಿಪಿದನೋ ನಂದ
ಸದ್ವಂಶವಮಂ ದು / ರ್ಭಾವಂ ಕೌಟಿಲ್ಯನೀತಂ ಗ್ರಹಣ
ಮಹುದು ಚಂದ್ರಂಗೆನಲ್ ಚಂದ್ರಗುಪ್ತಂ ॥ ಗಾವಂ
ನೋವೀವನೋ ಎಂದರಿದಿದನೊರೆದಂ ನಾಮಸಾದೃಶ್ಯ
ದಿಂದಂ। ನಾವಿನ್ನಿಲ್ಲಿಂದೆ ಪೋಪಂ ತಳುವದೆ ಸಖಿ!
ಮುಂದಪ್ಪುದಂ ಸಜ್ಜುಗೆಯ್ಯಲ್ ॥

(ಎಂದು ಹೊರಟುಹೋದರು)

(ಅನಂತರದಲ್ಲಿ ಬಿಚ್ಚಿಹೋದ ಶಿಖೆಯನ್ನು ತಡವಿಕೊಳ್ಳುತ್ತಾ
ಚಾಣಕ್ಯನು ಕೋಪದಿಂದ ಪ್ರವೇಶಿಸುವನು)

ಚಾಣಕ್ಯ—ಆಹ! ನಾನಿರಲದಾವನು ಚಂದ್ರಗುಪ್ತನನ್ನು
ತಿರಸ್ಕರಿಸಲೆಳಸುವನು? ನೋಡು.

ಕಂ॥ ಕುಂಜರ ಶೋಣಿತ ಪಾನದೆ।
ಸಂಜೆಯೊಳೊಗೆದಿಂದುರೇಖೆವೋಲ್ ಚೆಂಬೊಗರಿಂ ॥
ರಂಜಿಪ ಸಿಂಗನ ದಾಡೆಯ। 
ನಂಜದೆ ಕಳಚುವ ನದಾವ ನಾಗುಳಿಸಾಗಳ್ ॥

ಕಂ॥ ನಂದಕುಲವನ ದವಾನಲ।
ನಂದದೊಳುರಿವೆನ್ನ ಕೋಪಮುಂ ತಿಳಿದಾವಂ ॥
ಮುಂದಂ ಸ್ವಪರ ಬಲವಿನೇ।
ಕಂದಳಿಯದೆ ಮಡಿಪ ನಗ್ನಿಯಿಂ ಶಲಭಂಬೋಲ್ ॥

ಕಂ॥ ನಂದಕುಲಕಾಲ ಫಣಿವೊಲ್ ।
ಮಂದೇತರಕೋಪವಹ್ನಿ ಧೂಮಲತೆಯವೊಲ್ ॥
ನಿಂದೆನ್ನ ಕುರುಳ ಮುಡಿಯುಂ ।
ಬಂಧಿಪುದಂ ಗಾಂಪ ನಾವ ನೆಳಸಂ ಮಡಿಯಲ್ ॥

ಶಾರ್ಙ್ಗರವ ! ಶಾರ್ಙ್ಗರವ !

ಶಿಷ್ಯಂ—(ಪ್ರವೇಶಿಸಿ) ಗುರುಗಳೇ ! ಏನಪ್ಪಣೆ ?

ಚಾ—ಮಗೂ ! ಕುಳಿತುಕೊಳ್ಳಲೆಳಸುವೆನು.

ಶಿ -ಗುರುಗಳೇ ! ಈ ಬಾಗಿಲ ಮುಂದಣ ನೊಗಸಾಲೆಯಲ್ಲಿ ಬೆತ್ತದಚಾಪೆಯು ಸಿದ್ಧವಾಗಿಯೇ ಇರುವದಲ್ಲ ! ಆದುದರಿಂದ ಗುರುಗಳು ಇಲ್ಲಿ ಕುಳಿತುಕೊಳ್ಳಬಹುದು.

ಚಾ—ಮಗೂ ! ಕಾರ್ಯಾಭಿನಿವೇಶವು ಹೀಗೆ ನಮ್ಮನ್ನು ಬಳಲಿಸುವುದೇಹೊರತು ಶಿಷ್ಯರನ್ನು ಹಳಿಯುವ ಕೆಟ್ಟಚಾಳಿಯು ಉಪಾಧ್ಯಾಯರಿಗೆ ಒಡಹುಟ್ಟಿದುದಲ್ಲ. (ಕುಳಿತುಕೊಂಡಂತೆ ನಟಿಸಿ-ಆತ್ಮಗತಂ)

ನಂದ ಕುಲವಿನಾಶದಿಂದ ಕೆರಳಿರುವ ರಾಕ್ಷಸನು ಪಿತೃವಧೆಯಿಂದ ಮತ್ಸರಗೊಂಡ ಪರ್ವತೇಶ್ವರಪುತ್ರನಾದ ಮಲಯಕೇತುವಿನೊಡನೆ ಸಂಧಿಮಾಡಿ ನಂದರಾಜ್ಯವೆಲ್ಲವನ್ನೂ ಕೊಡುವೆನೆಂಬ ನಿಬಂಧನೆಯಿಂದ ಪ್ರೋತ್ಸಾಹಗೊಳಿಸಿ, ಮ್ಲೇಚ್ಛ ಸೇನಾಸಮೇತನಾದ ಅವನನೊಡಗೊಂಡು ಚಂದ್ರಗುಪ್ತನಂ ಮುತ್ತಲು ಉದ್ಯುಕ್ತನಾಗಿರುವನೆಂಬ ಈ ವಿಷಯವು ಪುರಜನರಿಗೆ ಹೇಗೆ ತಿಳಿಯಿತು ? (ಎಂದು ಯೋಚಿಸಿ)

ಅಥವಾ ಯಾವ ನಾನು ಎಲ್ಲರ ಮುಂದೆಯೂ-ನಂದವಂಶವನ್ನು ನಾಶಗೊಳಿಸುವೆನು-ಎಂದು ಶಪಥವನ್ನು ಮಾಡಿ ದುಸ್ತರವಾದ ಪ್ರತಿಜ್ಞಾ

ಸಾಗರವನ್ನು ದಾಂಟಿದೆನೋ, ಆ ನಾನು ಪ್ರಕಾಶವಾಗುತ್ತಿರುವ ಈ ಅರ್ಥವನ್ನು ಶಾಂತಿಗೊಳಿಸುವುದಕ್ಕೂ ಶಕ್ತನಾಗಿಯೇ ಇರುವೆನು. ಏಕೆಂದರೆ:—

ವೃ || ಅರಿರಮಣೀದಿಶಾ ಮುಖಶುಧಾಂಶುಗಳಂ ನೆರೆಶೋಕ ಧೂಮದಿಂ | ಕರಿದೆನಿಸುತ್ತೆ ಮಂತ್ರಿತರುಗಳ್ಗೆ ನಯಾನಿಲ ನೀತ ಮೋಹಭ || ಸ್ಮ ರಚನೆ ಗೆಯ್ಯು ಪೌರವಿಹಗಂಗಳ ನೋಡಿಸಿ ನಂದವಂಶಮಂ | ಕಡಮುರಿಪೆನ್ನ ಕೋಪಶಿಖಿ ದಾಹ್ಯವ ನಾನದೆ ಶಾಂತಿಯೊಂದುಗುಂ ||

ಮತ್ತಂ-ಮೊದಲೆನ್ನಂ ಪೀಠದಿಂ ನೂಂಕಿದಸಮಯಡೊಳಾರಂಜಿ ರಾಜಂಗೆ ದಿಕ್ಕ | ಬ್ಬದೊ ಳಾಶೀರ್ಷಂಗಳಂ ಬಾಗಿಸು ತದ ವಳಲಿಂ ಕಂಡರೋ ಆಜನಂಗಳ್|| ಪದಪಿಂದಂ ಸಿಂಹಪೋತಂ ಗಿರಿಶಿಖರದೆ ಕಾಡಾನೆಯಂ ನೂಂಕುವೋಲ್ ನಾಂ | ಮದ ವಾಂತೀ ನಂದರಂ ಪಟ್ಟದಿ ನುರುಳ್ಚುವದಂ ನೋಳ್ಪುದಂತೀಗ ಳಿಲ್ಲರ್ ||

ನಾನೀಗ ಪ್ರತಿಜ್ಞಾಭಾರವನ್ನಿಳುಹಿದ್ದರೂ ಮರಳಿ ವೃಷಲನಿಗಾಗಿ ಶಸ್ತ್ರವನ್ನು ಹಿಡಿಯುವೆನು. ಈಗಲಾದರೊ—

ವೃ|| ಧರೆಗೆ ನವಾಧಿ ಯೆಂದೆನಿಪ ನಂದನೃಪರ್ ಮಡಿದ ರ್ಮಹಾ ಹೃದಾಂ | ತರದೊಳ ಗಬ್ಜನೀಲತೆಯುವೊಲ್ ಸಿರಿ ಮಾರ್ಯನೊ ಳಾದುದು ಸ್ಥಿರಂ || ಎರಡಹ ಕೋಪಮೈತ್ರಿಗಳ ಸಾರಫಲ ದ್ವಯಮುಂ ಸಮಾನಮಾ | ಗರಿಸಖ ಗೊರ್ಮೆ ಭಾಗಿಸಿದು ದೆನ್ನ ಮನಂ ಕವಡಿಲ್ಲದಂದದಿಂ ||

ಅಥವಾ ರಾಕ್ಷಸನನ್ನು ಹಿಡಿಯದಿದ್ದರೆ ನಂದವಂಶವನ್ನು ಏನು ಕಿತ್ತುಹಾಕಿ ದಂತಾಯಿತು ? ಚಂದ್ರಗುಪ್ತಲಕ್ಷ್ಮಿಗೆತಾನೇ ಏನು ಸ್ಥೈರ್ಯವನ್ನುಂಟು ಮಾಡಿದಂತಾಯಿತು ? (ಎಂದು ಯೋಚಿಸಿ)

ಆಹಾ ! ರಾಕ್ಷಸನಿಗೆ ನಂದವಂಶದಲ್ಲಿರುವ ಭಕ್ತಿಯು ನಿರತಿಶಯವಾದುದು. ಯಾವುದಾದರೂ ಒಂದು ನಂದವಂಶದ ಹಸುಳೆಯು ಬದುಕಿದ್ದಲ್ಲಿ ರಾಕ್ಷಸನಿಂದ ವೃಷಲನಿಗೆ ಮಂತ್ರಿತ್ವವನ್ನು ಮಾಡಿಸುವುದಕ್ಕಾಗುತ್ತಿರಲಿಲ್ಲ. ಈಗ ಆ ನಂದವಂಶಪ್ರತಿಷ್ಠೆಯಲ್ಲಿ ಉದ್ಯಮವನ್ನು ಬಿಟ್ಟಿರುವ ಇವನಿಂದ ಆ ಕಾರ್ಯವನ್ನು ಮಾಡಿಸಬಹುದು.

ನಾವೂ ಹೀಗೆಂದು ತಿಳಿದೇ ತಪೋವನದಲ್ಲಿದ್ದರೂ ನಂದವಂಶದವನೆಂದೆಣಿಸಿ ದೀನನಾದ ಸರ್ವಾರ್ಥಸಿದ್ಧಿಯನ್ನು ಕೊಲ್ಲಿಸಿದೆವು. ಇವನಾದರೆ ಮಲಯಕೇತುವಿನೊಡನೆ ಸೇರಿ ನಮ್ಮ ನಾಶಕ್ಕೆ ಬಹಳವಾಗಿ ಪ್ರಯತ್ನಗಳನ್ನು ಮಾಡಲೇಮಾಡುವನು. (ಪ್ರತ್ಯಕ್ಷವಾದಂತೆ ಆಕಾಶದಲ್ಲಿ ಲಕ್ಷ್ಯವನ್ನಿಟ್ಟು)

ಭಾಪು ! ಅಮಾತ್ಯರಾಕ್ಷಸನೆ ! ಮಂತ್ರಿ ಬೃಹಸ್ಪತಿಯೇ ! ಶ್ರೋತ್ರಿಯನೆ ! ಭಾಪು !!

ವೃ|| ಬಳಿವಿಡಿದೆಲ್ಲ ರೋಲಯಿಪ ರೈಸಿರಿಯುಳ್ಳರ ನರ್ಥಲೋಭದಿಂ | ದೆಳಸಿ ಮರಳ್ದವ ರ್ನೆಲೆಯ ನೊಂದುವ ರೆಂದೆಡರಲ್ಲಿಯುಂ ಕೆಲರ್ || ಬಳಸುವ ರಾಣ್ಮನಿಲ್ಲದೊಡ ಮಂತಹ ಮುನ್ನಿನ ರಾಜಭಕ್ತಿಯಂ| ಬೆಳೆಯಿಸಿ ಕಾರ್ಯಮಂ ನೆಗಳ್ವ ನಿನ್ನ ವೊಲಿರ್ಪವರಲ್ತೆ ದುರ್ಲಭರ್ ||

ಆದುದರಿಂದಲೇ ನಿನ್ನನ್ನು ವಶಗೊಳಿಸಿಕೊಳ್ಳಬೇಕೆಂಬ ಯತ್ನವು, ಮತ್ತು "ಈ ರಾಕ್ಷಸನು ಚಂದ್ರಗುಪ್ತನ ಮಂತ್ರಿತ್ವವನ್ನುವಹಿಸಿ ಅವನನ್ನು ಹೇಗೆ ಅನುಗ್ರಹಿಸುವನು ? " ಎಂಬ ಚಿಂತೆಯು, ಏಕೆಂದರೆ:—

ವೃ॥ ತಿಳಿವಣಮಿಲ್ಲ ದಂಜುಪುರಕಂ ನೃಪಭಕ್ತಿಯನುಳ್ಳೊಡೇಂ
ಫಲಂ। ಬಲದೃಢಬುದ್ಧಿಯುಳ್ಳೊಡ ಮದೇಂ ಫಲಮಪ್ಪು
ದು ಭಕ್ತಿಹೀನನಿಂ॥ ಬಲದೃಢಬುದ್ಧಿಭಕ್ತಿಗಳ ನಾಂತವರೇ
ನೃಪಭೃತ್ಯ ರನ್ಯರಾ। ಇಳೆಯರಸಂಗೆ ಸಂಪದದೊಳುಂ
ವಿಪದಂಗಳೊಳುಂ ಕಳತ್ರಮೈ॥

ಆದುದರಿಂದ ನಾವೂ ಈವಿಷಯದಲ್ಲಿ ಎಚ್ಚರವಾಗಿಯೇ ಇರುವೆವು. ಮತ್ತು
ಯಥಾಶಕ್ತಿಯಾಗಿ ಆತನನ್ನು ಹಿಡಿಯುವುದಕ್ಕೆ ಪ್ರಯತ್ನವನ್ನೂಮಾಡು
ತ್ತಿರುವೆವು. ಎಂತೆಂದರೆ---

"ಈ ಚಂದ್ರಗುಪ್ತ ಪರ್ವತೇಶ್ವರರಲ್ಲಿ ಯಾವನೊಬ್ಬನು ಮಡಿದರೂ ಚಾಣಕ್ಯ
ನಿಗೇ ಅಪಾಯವಾಗುವುದೆಂದೆಣಿಸಿ ಅಮಾತ್ಯರಾಕ್ಷಸನು ನಮಗತ್ಯಂ
ತೋಪಕಾರಿಯು, ಮಿತ್ರನು ಆಗಿದ್ದ ಪರ್ವತೇಶ್ವರನನ್ನು ವಿಷಕನ್ಯೆಯಿಂದ
ಕೊಲ್ಲಿಸಿದನು" ಎಂಬ ಜನಾಪವಾದವನ್ನು ಲೋಕದಲ್ಲಿ ಪ್ರಚಾರಗೊಳಿ
ಸಿರುವೆನು. ಪ್ರಜೆಗಳನಂಬಿಕೆಗಾಗಿಯೂ, ಈ ಅರ್ಥವನ್ನೇ ಕಾಲಾಂತರ
ದಲ್ಲಿ ಹೊರಪಡಿಸುವುದಕ್ಕಾಗಿಯೂ "ನಿನ್ನ ತಂದೆಯನ್ನು ಚಾಣಕ್ಯನು
ಕೊಲ್ಲಿಸಿದನೆಂದು" ಹೆದರಿಸಿ ಭಾಗುರಾಯಣನು ಪರ್ವತಪುತ್ರನಾದ
ಮಲಯಕೇತುವನ್ನು ಹೊರಡಿಸಿಕೊಂಡು ಹೋಗಿರುವನು. ಈ ಮಲಯ
ಕೇತುವು ಬುದ್ಧಿಶಾಲಿಯಾದ ರಾಕ್ಷಸನೊಡಗೂಡಿ ಪ್ರತಿಭಟಿಸಿದರೂ
ನಮ್ಮ ಬುದ್ಧಿಯಿಂದ ನಿಗ್ರಹಿಸಲು ಅಸಾಧ್ಯನಲ್ಲ. ಆದರೂ ಇವನನ್ನು
ನಿಗ್ರಹಿಸಿ ಪರ್ವತೇಶ್ವರವಿನಾಶದಿಂದ ಪ್ರಕಾಶವಾಗಿ ಹಬ್ಬುತ್ತಿರುವ
ರಾಕ್ಷಸನ ಅಪಕೀರ್ತಿಯನ್ನು ಕೆಡಿಸಲು ನನಗಿಷ್ಟವಿಲ್ಲ.

ಸ್ವಪಕ್ಷಪರಪಕ್ಷಗಳಲ್ಲಿ ಅನುರಕ್ತರೂ ಅಪರಕ್ತರೂ ಆಗಿರುವ ಪ್ರಜೆಗಳನ್ನು
ತಿಳಿಯುವುದಕ್ಕಾಗಿ ಅನೇಕವಿಧಗಳಾದ ದೇಶವೇಷಭಾಷಾಚಾರಸಂಚಾರ

ಗಳನ್ನು ತಿಳಿದ ಗೂಢಚಾರರನ್ನು ನಾನಾವೇಷಗಳಿಂದ ಕಳುಹಿಸಿರುವೆನು ಕುಸುಮಪುರದಲ್ಲಿ ನೆಲೆಗೊಂಡಿರುವ ನಂದಾಮಾತ್ಯಮಿತ್ರರ ಏಕಾಂತ ಗಳಾದ ಕಪಟಾಚರಣೆಗಳೂ ಭೇದಿಸಲ್ಪಡುತ್ತಲೇ ಇರುವುವು. ಚಂದ್ರ ಗುಪ್ತನೊಡನಭಿವೃದ್ಧಿಯನ್ನು ಪಡೆದ ಭದ್ರಭಟಪ್ರಮುಖರಾದ ಪ್ರಧಾನ ಪುರುಷರಿಗೂ ಆ ಆ ಕಾರಣಗಳನ್ನು ಕಲ್ಪಿಸಿ ಕೃತಕೃತ್ಯತೆಯನ್ನುಂಟು ಮಾಡಿರುವೆನು. ಶತ್ರುಗಳಿಂದ ನಿಯುಕ್ತರಾದ ದುಃಖದಾಯಿಗಳ ಪ್ರತಿಕ್ರಿಯೆಗಾಗಿ ಜಾಗರೂಕರು, ಸ್ವಾಮಿಭಕ್ತರೂ ಆಗಿರುವ ಆಪ್ತ ರಾದ ಪ್ರಧಾನಪುರುಷರನ್ನು ರಾಜನ ಸಮೀಪದಲ್ಲಿಯೇ ಇರುವಂತೆ ಅಲ್ಲಲ್ಲಿ ನಿಯಮಿಸಿರುವೆನು. ನಮಗೆ ಸಹಾಧ್ಯಾಯಿಯೂ, ಮಿತ್ರನೂ ಆಗಿರುವ ಇಂದುಶರ್ಮನೆಂಬ ಬ್ರಾಹ್ಮಣನಿರುವನಷ್ಟೆ! ಆತನು ಶುಕ್ರಾ ಚಾರ್ಯರ ನೀತಿಶಾಸ್ತ್ರದಲ್ಲಿಯೂ, ಚತುಷ್ಷಷ್ಟ್ಯಂಗವಾದ ಜ್ಯೋತಿಶ್ಶಾಸ್ತ್ರ ದಲ್ಲಿಯೂ ಬಹಳ ಪಾಂಡಿತ್ಯವನ್ನು ಪಡೆದಿರುವನು. ನಾನು ನಂದವಂಶ ಸಂಹಾರದಲ್ಲಿ ಪ್ರತಿಜ್ಞೆಯನ್ನು ಮಾಡಿದ ಒಡನೆಯೇ ಆತನನ್ನು ಕ್ಷಪಣಕ ವೇಷದಿಂದ ಕುಸುಮಪುರಕ್ಕೆ ಕಳುಹಿ ನಂದಾಮಾತ್ಯರೊಡನೆ ಸ್ನೇಹ ವನ್ನು ಮಾಡಿಸಿರುವೆನು.

ಅವರೊಳಗೂ ಅಮಾತ್ಯರಾಕ್ಷಸನಿಗೆ ಆತನಲ್ಲಿ ಬಹಳ ನಂಬುಗೆ ಯುಂಟು. ಆದಕಾರಣ ಆತನಿಂದೀಗ ಬಹಳ ಪ್ರಯೋಜನವಾಗತಕ್ಕು ದಾಗಿರುವುದು. ಹೀಗಿರುವುದರಿಂದ ನಾವು ಪ್ರತೀಕಾರಮಾಡದೆ ಯಾವು ದನ್ನೂ ಬಿಟ್ಟಂತಾಗಲಿಲ್ಲ. ವೃಷಲನಾದರೆ ಪ್ರಧಾನಪುರುಷರಾದ ನಮ್ಮಲ್ಲಿ ರಾಜ್ಯತಂತ್ರಭಾರವನ್ನಿಟ್ಟು ಯಾವಾಗಲೂ ಉದಾಸೀನನಾಗಿ ಇರುವನು. ಅಥವಾ ಬಹುಳವಾದ ಕಾರ್ಯಚಿಂತೆಗಳಿಲ್ಲದ ರಾಜ್ಯವಾವುದೋ, ಅದೇ ಸುಖಕರವಾದುದು. ಏಕೆಂದರೆ,—

ಕಂ|| ವಸುಧೇಶರಿಭೇಶ್ವರರುಂ ।
ನಿಸರ್ಗದಿಂ ಕಲಿಗಳಾದೊಡಂ ತಾಂ ಸಂಪಾ ||
ದಿಸಿತರುತೆ ಭುಂಜಿಪುದರಿಂ ।
ರಸೆಯೊಳ್ ಬಸವಳಿದು ಬಿದೆಯುನಾಂಪುದು ಸಾಜಂ||

(ಆಮೇಲಿ ಯಮಪಟದೊಡನೆ ಚಾರಂ ಪ್ರವೇಶಿಸುವನು)

ಚಾರಂ—

ಕಂ|| ಜವನಡಿಗಳಿಗೆರಗಿರಿ ವಾ ।
ನವರಿರ ! ನಿಮಗನ್ಯದೇವತೆಗಳಿಂ ಫಲಮೇಂ ||
ಇವನನ್ಯಭಕ್ತರಹ ಮಾ ।
ನವರಂ ಪೀಡಿಸುತೆ ಜೀವಮಂ ಕಳೆದಪನೈ ||

ಮತ್ತಂ- ಬಿಡ ದಂತಕನೊಳ್ಭಕ್ತಿಯು ।
ನಿಡದಿರೆ ಪುರುಷರ್ಗೆ ವಿಷಮ ವಹು ದಾಯುಷ್ಯಂ ||
ಪೊಡವಿಯೊಳೆಲ್ಲರ ಜೀವಂ ।
ಬಿಡಿಯುವ ಜವನೊಲ್ಮೆಯಿಂದೆ ಬದುಕಿರ್ದಪೆವೈ ||

(ಎಂದು ಪ್ರವೇಶಿಸಿ)

ಇದು ಬ್ರಾಹ್ಮಣರ ಮನೆ; ಈ ಮನೆಗೆ ಹೋಗಿ ಯಮಪಟವನ್ನು ತೋರಿಸಿ ಹಾಡುಗಳನ್ನು ಹಾಡುವೆನು. (ಎಂದೊಳಹೊಗುವನು)

ಶಿಷ್ಯಂ—(ನೋಡಿ) ಅಯ್ಯಾ! ಒಳಕ್ಕೆ ಹೋಗಬೇಡ.

ಚಾರಂ—ಅಯ್ಯಾ ಬ್ರಾಹ್ಮಣನೆ! ಇದು ಯಾರಮನೆ ?

ಶಿಷ್ಯಂ—ಪ್ರಖ್ಯಾತರಾದ ನಮ್ಮ ಚಾಣಕ್ಯೋಪಾಧ್ಯಾಯರ ಮನೆ.

ಚಾರಂ—(ನಕ್ಕು) ಅಯ್ಯಾ ಬ್ರಾಹ್ಮಣನೆ! ಇದು ನ್ಯಾಯವಾಗಿ ನಮ್ಮ ಸಹೋದರನಮನೆಯೇ ಆಯಿತು; ದಾರಿಬಿಡು. ಯಮಪಟವನ್ನು ತೋರಿಸಿ ನಿಮ್ಮ ಉಪಾಧ್ಯಾಯನಿಗೆ ಧರ್ಮೋಪದೇಶವನ್ನು ಮಾಡುವೆನು.

ಶಿಷ್ಯಂ (ಕೋಪದಿಂದ) ಛೀ! ಮೂರ್ಖನೇ! ನೀನು ನಮ್ಮ ಉಪಾಧ್ಯಾಯರಿಗಿಂತಲೂ, ಅಧಿಕವಾಗಿ ಧರ್ಮಗಳನ್ನು ಬಲ್ಲವನೊ?

ಚಾರಂ—ಅಯ್ಯಾ ಬ್ರಾಹ್ಮಣನೆ! ಕೋಪಗೊಳ್ಳಬೇಡ, ಎಲ್ಲರೂ ಎಲ್ಲವನ್ನೂ ಬಲ್ಲವರಲ್ಲವಲ್ಲಾ! ಆದುದರಿಂದ ನಿಮ್ಮ ಉಪಾಧ್ಯಾಯನೂ ಕೊಂಚ ಬಲ್ಲನು. ನಮ್ಮಂತವರೂ ಕೊಂಚ ಬಲ್ಲೆವು.

ಶಿಷ್ಯಂ—ಮೂರ್ಖನೆ! ನಮ್ಮ ಉಪಾಧ್ಯಾಯನ ಸರ್ವಜ್ಞತ್ವವನ್ನು ಕದಿಯಲೆಳಸುವೆಯಾ?

ಚಾರಂ—ಅಯ್ಯಾಬ್ರಾಹ್ಮಣನೆ! ನಿಮ್ಮ ಉಪಾಧ್ಯಾಯನು ಸರ್ವಜ್ಞನಾಗಿದ್ದರೆ ಚಂದ್ರನು ಯಾರಿಗಾಗದವನು? ಎಂಬುದನ್ನು ತಿಳಿಯಲಿ.

ಶಿಷ್ಯಂ—ಮೂರ್ಖನೇ! ಇದನ್ನು ತಿಳಿದರೇನು? ತಿಳಿಯದಿದ್ದರೇನು?

ಚಾರಂ—ಇದನ್ನು ತಿಳಿದುದರಿಂದ ಏನಾಗುವುದೆಂಬುದನ್ನು ನಿಮ್ಮ ಉಪಾಧ್ಯಾಯನೇ ಬಲ್ಲನು. ನೀನಾದರೋ "ಕಮಲಗಳಿಗಾಗದವನು ಚಂದ್ರನು" ಎಂದು ಮಾತ್ರ ತಿಳಿದಿರುವೆ; ಆದರೆ ನೋಡು.

ಕಂ॥ ಜಗಮಂ ಬೆಳಗಿಪ ಚಂದ್ರಂ ।
ನೆಗಳ್ದಿರೆ ಸಂಪೂರ್ಣ ಮಂಡಲಂ ತಾವರೆಗಳ್ ।
ಪಗೆತನಮಂ ಬಗೆವುದರಿಂ ।
ಸೊಗಯಿಸಿಗೊಡ ಮಿಡದ ರೂಪು ಶೀಲಂ ವಿಷಮಂ॥

ಚಾಣಕ್ಯಂ--(ಕೇಳಿ ಆತ್ಮಗತಂ) ಆಹ! ಇದರಿಂದ "ಚಂದ್ರಗುಪ್ತನಲ್ಲಿ ಅಸಮಾಧಾನಗೊಂಡಿರುವ ಜನಗಳನ್ನು ತಿಳಿದಿರುವೆನು" ಎಂದು ಇವನು ಗೂಢಾಭಿಪ್ರಾಯವನ್ನು ಸೂಚಿಸಿದಂತಾಯಿತು.

ಶಿಷ್ಯಂ—ಮೂರ್ಖನೆ! ಏನು ಅಸಂಬದ್ಧವನ್ನಾಡುವೆ?

ಚಾರಂ—ಅಯ್ಯಾ ಬ್ರಾಹ್ಮಣನೆ! ಇದೂ ಸುಸಂಬದ್ಧವೇ ಆಗುವುದು.

ಶಿಷ್ಯಂ—ಯಾವಾಗ?

ಚಾರಂ—ಕೇಳಿ ತಿಳಿದುಕೊಳ್ಳುವವನು ದೊರೆತಾಗ.

ಚಾಣ—ಅಯ್ಯಾ! ಧಾರಾಳವಾಗಿ ಒಳಗೆ ಬಾ; ಕೇಳತಕ್ಕವನೂ, ತಿಳಿದುಕೊಳ್ಳತಕ್ಕವನೂ ದೊರಕುವನು.

ಚಾರಂ—ಇದೊ ಬಂದೆನು. (ಎಂದು ಒಳಹೊಕ್ಕಂತೆ ನಟಿಸಿ) ಜಯವಾಗಲಾರ್ಯನಿಗೆ.

ಚಾಣ—(ನೋಡಿ ಮನಸ್ಸಿನಲ್ಲಿ) ಏನು? ಪ್ರಜೆಗಳ ಮನಸ್ಸನ್ನು ತಿಳಿಯುವುದಕ್ಕಾಗಿ ನಿಯುಕ್ತನಾಗಿದ್ದ ನಿಪುಣಕನೊ? ಇವನು. (ಪ್ರಕಾಶಂ) ಅಯ್ಯಾ! ನೆಮ್ಮದಿಯಾಗಿ ಬಂದೆಯಾ? ಕುಳಿತುಕೊ.

ಚಾರಂ—ಆರ್ಯನಾಜ್ಞೆಯಂತಾಗಲಿ (ಎಂದು ನೆಲದಮೇಲೆ ಕುಳಿತುಕೊಂಡನು)

ಚಾಣ—ಅಯ್ಯಾ! ನಿನಗೆ ನಿಯಮಿಸಿದ್ದ ವೃತ್ತಾಂತವನ್ನೀಗ ವಿವರಿಸು. ಪ್ರಜೆಗಳೆಲ್ಲರೂ ವೃಷಲನಲ್ಲಿ ಅನುರಕ್ತರಾಗಿರುವರೆ?

ಚಾರಂ—ಅಹುದು. ಆರ್ಯನು ಆ ಆ ಅಸಮಾಧಾನ ಕಾರಣಗಳನ್ನು ಹೋಗಲಾಡಿಸಿದುದರಿಂದ ಪ್ರಖ್ಯಾತನಾಮಧೇಯನಾದ ಚಂದ್ರಗುಪ್ತ ಮಹಾರಾಜನಲ್ಲಿ ಪ್ರಜೆಗಳೆಲ್ಲರೂ ಸಂಪೂರ್ಣವಾಗಿ ಅನುರಕ್ತರಾಗಿರುವರು. ಆದರೆ ಈ ಪಟ್ಟಣದಲ್ಲಿ ಮೊದಲಿಂದಲೂ, ಅಮಾತ್ಯನೊಡನೆ ಸ್ನೇಹ

ಬಹುಮಾನಗಳನ್ನು ಪಡೆದಿರುವ ಮೂವರುಮಾತ್ರ ಚಂದ್ರಗುಪ್ತನ ಸಂಪತ್ತನ್ನು ಸೈರಿಸುತ್ತಿಲ್ಲವೆಂಬುದೊಂದುಂಟು.

ಚಾಣ—(ಕೋಪದಿಂದ) ತಾವು ಬದುಕುವುದನ್ನೇ ಸೈರಿಸಲಾರರೆಂದು ಹೇಳಬೇಕಲ್ಲವೆ! ಅಯ್ಯಾ! ಅವರ ಹೆಸರುಗಳನ್ನು ಬಲ್ಲೆಯಾ?

ಚಾರಂ—ಆರ್ಯನೆ! ಹೆಸರುಗಳನ್ನು ತಿಳಿಯದೆ ಸ್ವಾಮಿಯಲ್ಲಿ ವಿಜ್ಞಾಪಿಸುವೆನೆ?

ಚಾಣ—ಆದರೆ ಕೇಳಲಪೇಕ್ಷಿಸುವೆನು.

ಚಾರಂ—ಆರ್ಯನು ಆಲಿಸಬೇಕು. ಮೊದಲನೆಯವನು ಆರ್ಯನ ಶತ್ರುಪಕ್ಷದಲ್ಲಿ ದೃಢಪಕ್ಷಪಾತಿಯಾದ ಜೀವಸಿದ್ಧಿಯೆಂಬ ಕ್ಷಪಣಕನು

ಚಾಣ—(ಸಂತೋಷದಿಂದ ಆತ್ಮಗತಂ) ಕ್ಷಪಣಕನು ನಮ್ಮ ಶತ್ರುಪಕ್ಷದಲ್ಲಿ ದೃಢಪಕ್ಷಪಾತಿಯಾಗಿರುವನು.

ಚಾರಂ—ಅಮಾತ್ಯರಾಕ್ಷಸನಿಂದ ಪ್ರೇರಿತಳಾದ ವಿಷಕನ್ನೆಯನ್ನು ಸ್ವಾಮಿಯಾದ ಪರ್ವತೇಶ್ವರನೊಡನೆ ಸೇರಿಸಿದ ಜೀವಸಿದ್ಧಿಯೆಂಬವನು ಇವನೇ.

ಚಾಣ—(ಆತ್ಮಗತಂ) ಆ ಜೀವಸಿದ್ಧಿಯು ನಮ್ಮ ಗೂಢಚಾರನೇ. (ಪ್ರಕಾಶಂ) ಅಯ್ಯಾ! ಇನ್ನೊಬ್ಬನಾರು?

ಚಾರಂ—ಆರ್ಯನೇ! ಇನ್ನೊಬ್ಬನು ಅಮಾತ್ಯರಾಕ್ಷಸನಿಗೆ ಪ್ರಿಯಮಿತ್ರನಾದ ಶಕಟದಾಸನೆಂಬ ಗಣದಿಗನು.

ಚಾಣ—(ನಕ್ಕು-ಆತ್ಮಗತಂ) ಗಣದಿಗನೆಂದರೆ ಅವನೆಷ್ಟರವನು. ಆದರೆ ಶತ್ರುವು ಅಲ್ಪನಾದರೂ ಉದಾಸೀನಮಾಡುವುದು ಯುಕ್ತವಲ್ಲ. ಆದುದರಿಂದಲೇ ನಾನು ಅವನ ಬಳಿಯಲ್ಲಿ ಮಿತ್ರನೆಂಬ ನೆವದಿಂದ ಸಿದ್ಧಾರ್ಥಕನನ್ನಿಟ್ಟಿರುವೆನು. (ಪ್ರಕಾಶಂ) ಒಳ್ಳೆಯದು. ಮೂರನೆಯವನಾರು?

ಚಾರಂ—ಮೂರನೆಯವನು ಅಮಾತ್ಯನಿಗೆ ದ್ವಿತೀಯಹೃದಯವೆನಿಸಿ ಪುಷ್ಪಪುರದಲ್ಲಿ ನೆಲೆಗೊಂಡಿರುವ ಚಂದನದಾಸನೆಂಬ ರತ್ನವ್ಯಾಪಾರಿಯು, ಅಮಾತ್ಯನು ಪಟ್ಟಣದಿಂದ ಹೊರಟುಹೋಗುವಾಗ ತನ್ನ ಕುಟುಂಬವನ್ನು ಬಿಟ್ಟಿರುವುದು ಈತನ ಮನೆಯಲ್ಲಿಯೇ.

ಚಾಣ—(ಸ್ವಗತಂ) ದಿಟ. ಪ್ರಿಯತಮನೇ ಅಹುದು. ತನಗೆ ಪ್ರಾಣಪ್ರಿಯನಲ್ಲದಿದ್ದರೆ, ರಾಕ್ಷಸನು ಅವನ ಮನೆಯಲ್ಲಿ ತನ್ನ ಕುಟುಂಬವನ್ನು ಬಿಟ್ಟು ಹೋಗುತ್ತಿರಲಿಲ್ಲ.

(ಪ್ರಕಾಶಂ) ಅಯ್ಯಾ! ರಾಕ್ಷಸನು ತನ್ನ ಕುಟುಂಬವನ್ನು ಚಂದನದಾಸನ ಮನೆಯಲ್ಲಿ ಬಿಟ್ಟಿರುವನೆಂದು ಹೇಗೆ ಬಲ್ಲೆ?

ಚಾರಂ—ಆರ್ಯನೇ! ಈ ಮುದ್ರೆಯುಂಗುರವೇ ಆರ್ಯನಿಗೆ ಎಲ್ಲ ವೃತ್ತಾಂತವನ್ನೂ ತಿಳುಹುವುದು. (ಎಂದುಂಗುರವನ್ನೊಪ್ಪಿಸುವನು)

ಚಾಣ—(ಉಂಗುರವನ್ನು ತೆಗೆದುಕೊಂಡು ರಾಕ್ಷಸನ ಹೆಸರನ್ನು ಓದಿ ಸಂತೋಷದಿಂದ ತನ್ನಲ್ಲಿತಾನು)

ಭಾಪು! ರಾಕ್ಷಸನೇ ನಮ್ಮ ಕೈವಶನಾದನೆಂದು ಹೇಳಬೇಕಲ್ಲವೆ? (ಪ್ರಕಾಶಂ) ಅಯ್ಯಾ! ಈ ಮುದ್ರೆಯುಂಗರವು ದೊರೆತ ಸಂಗತಿಯನ್ನು ವಿಸ್ತರದಿಂದ ಕೇಳಲಪೇಕ್ಷಿಸುವೆನು.

ಚಾರಂ—ಆರ್ಯನು ಅವಧರಿಸಬೇಕು. ಪುರಜನರ ಚರಿತ್ರೆಯನ್ನು ತಿಳಿಯಲು ಆರ್ಯನಿಂದ ಆಜ್ಞಪ್ತನಾದ ನಾನು ಪರಗೃಹವೇಶದಲ್ಲಿ ಇತರರಿಗೆ ಸಂಶಯವನ್ನುಂಟುಮಾಡದ ಈ ಯಮಪಟವನ್ನು ಹಿಡಿದು ಸಂಚರಿಸುತ್ತಾ ರತ್ನವ್ಯಾಪಾರಿಯಾದ ಚಂದನದಾಸಸೆಟ್ಟಿಯಮನೆಗೆ ಹೋಗಿ ಅಲ್ಲಿ ಯಮಪಟವನ್ನು ಹರವಿ ಹಾಡುಗಳನ್ನು ಹಾಡತೊಡಗಿದೆನು.

ಚಾಣ—ಆಮೇಲೆ?

ಚಾರಂ—ಆಮೇಲೆ ಒಂದು ನೆಲಮಾಳಿಗೆಯಿಂದ ಸುಂದರಾಕೃತಿಯಿಂದೊಪ್ಪುವ ಐದಾರುವರ್ಷಗಳ ವಯಸ್ಸುಳ್ಳ ಒಬ್ಬ ಬಾಲಕನು ಬಾಲ್ಯಸಹಜವಾದ ಕುತೂಹಲದಿಂದ ಹಿಗ್ಗುತ್ತಾ ನೋಡುವುದಕ್ಕಾಗಿ ಹೊರಗೆ ಹೊರಡ ತೊಡಗಿದನು. ತರುವಾಯ ಅಯ್ಯೋ! ಹೊರಟನು! ಹೊರಟನು! ಎಂದು ಭಯಶಂಕೆಗಳನ್ನು ಸೂಚಿಸುವಂತೆ ಅದೇ ನೆಲಮಾಳಿಗೆಯಲ್ಲಿ ಹೆಂಗಸರ ದೊಡ್ಡ ಗದ್ದಲವುಂಟಾಯಿತು ಬಳಿಕ ಒಬ್ಬ ಹೆಂಗಸು ಬಾಗಿಲಲ್ಲಿ ಕೊಂಚವಾಗಿ ಇಣಿಕಿನೋಡಿ ಹೊರಗೆ ಬರುತ್ತಿರುವಾಗಲೇ ಆ ಕುಮಾರ ನನ್ನು ಗದರಿಸಿ ತನ್ನ ಕೋಮಲವಾದ ಬಾಹುಲತೆಯಿಂದ ತೆಡೆದು ಹಿಡಿದು ಕೊಂಡಳು. ಆಗ ಮಗುವನ್ನು ತಡೆಯುವ ಸಂಭ್ರಮದಿಂದ ಕೈಬೀಸಲು ಪುರುಷಾಂಗುಳಿಪರಿಮಾಣದ ಈ ಮುದ್ರಿಕೆಯು ಆಕೆಯ ಕೈಬೆರಳಿಂದ ಜಾರಿ ಅವಳಿಗೆ ತಿಳಿಯದಂತೆಯೇ ಹೊಸ್ತಿಲಲ್ಲಿಬಿದ್ದು ಪುಟನೆಗೆದು ನನ್ನ ಪಾದದ ಬಳಿಗೆ ಬಂದು ನಮಸ್ಕಾರನಮ್ರಳಾದ ಕುಲವಧುವಿನಂತೆ ಚಲಿಸದೆ ನಿಂತಿತು. ನಾನೂ ಈ ಮುದ್ರೆಯು ಅಮಾತ್ಯನ ಹೆಸರಿನದೆಂದು ತಿಳಿದು ಸ್ವಾಮಿಯ ಪಾದಕ್ಕೆ ಒಪ್ಪಿಸಿದೆನು. ಇದೇ ಮುದ್ರೆಯು ದೊರೆತ ಸಂಗತಿಯು.

ಚಾಣ —ಅಯ್ಯಾ! ಕೇಳಿದುದಾಯಿತು ; ಹೊರಡು. ಶೀಘ್ರವಾಗಿಯೇ ಇದಕ್ಕೆ ತಕ್ಕ ಫಲವನ್ನು ಪಡೆಯುವೆ

ಚಾರಂ —ಆರ್ಯನಾಜ್ಞೆಯಂತಾಗಲಿ (ಎಂದು ಹೊರಟುಹೋದನು)

ಚಾಣ—ಶಾರ್ಙ್ಗರವ ? ಶಾರ್ಙ್ಗರವ ?

ಶಿಷ್ಯಂ —(ಪ್ರವೇಶಿಸಿ) ಗುರುಗಳೆ ! ಏನಪ್ಪಣೆ ?

ಚಾಣ —ಮಗೂ! ಮಸೀಕುಡಿಕೆಯನ್ನೂ ಕಾಗದವನ್ನೂ ತೆಗೆದುಕೊಂಡು ಬಾ.

ಶಿಷ್ಯಂ—(ಹಾಗೆಯೇ ಮಾಡುವನು.)

ಚಾಣ—(ಕಾಗದವನ್ನು ತೆಗೆದುಕೊಂಡು ತನ್ನಲ್ಲಿತಾನು) ಇಲ್ಲಿ ಏನನ್ನು ಬರೆಯಲಿ ? ಇದರಿಂದಲ್ಲವೆ ? ರಾಕ್ಷಸನನ್ನು ಜಯಿಸಬೇಕು.

(ಪ್ರತಿಹಾರಿ ಪ್ರವೇಶಿಸಿ) ಜಯ ವಾಗ ಲಾರ್ಯನಿಗೆ

ಚಾಣ—(ಸಂತೋಷದಿಂದ ಆತ್ಮಗತಂ) ಜಯಶಬ್ದವನ್ನು ಹೊಂದಿದೆನು.

(ಪ್ರಕಾಶಂ) ಶೋಣೋತ್ತರೆ ! ಏತಕ್ಕಾಗಿ ಬಂದೆ ?

ಪ್ರತಿಹಾರಿ—ಆರ್ಯನೇ ! ಸ್ವಾಮಿಯಾದ ಚಂದ್ರಗುಪ್ತನು, ಕಮಲಮುಕುಳಾಕಾರವಾದ ಅಂಜಲಿಯನ್ನು ಶಿರಸಾ ಧರಿಸಿ, ಆರ್ಯನ ಅಪ್ಪಣೆಯನ್ನು ಪಡೆದು ಮಹಾರಾಜನಾದ ಪರ್ವತೇಶ್ವರನಿಗೆ ಪಾರಲೌಕಿಕ ಕ್ರಿಯೆಗಳನ್ನು ನಡೆಯಿಸುವುದಕ್ಕೂ, ಆತನು ಮೊದಲು ಧರಿಸುತ್ತಿದ್ದ ಆಭರಣಗಳನ್ನು ಬ್ರಾಹ್ಮಣರಿಗೆ ದಾನಮಾಡುವುದಕ್ಕೂ, ಆರ್ಯನನ್ನು ಬೇಡುವನು.

ಚಾಣ—(ಸಂತೋಷದಿಂದ ಆತ್ಮಗತಂ) ಭಾಪು ! ವೃಷಲನೆ ! ನನ್ನ ಹೃದಯದೊಡನೆ ಆಲೋಚಿಸಿಯೇ ಹೇಳಿಕಳುಹಿಸಿರುವೆ.

(ಪ್ರಕಾಶಂ) ಶೋಣೋತ್ತರೆ ! ವೃಷಲನಿಗೆ ಹೇಳು. "ಒಳ್ಳೆಯದು ಮಗು ! ಲೋಕವ್ಯವಹಾರಗಳನ್ನು ಅರಿತವನಾದೆ, ಆದುದರಿಂದ ನಿನ್ನ ಕೋರಿಕೆಯಿದ್ದಂತೆ ನಡಿಸು. ಆದರೆ ಪರ್ವತೇಶ್ವರನು ಧರಿಸುತ್ತಿದ್ದ ಒಡವೆಗಳು ಗುಣವತ್ತರಗಳಾದುದರಿಂದ ಅವುಗಳನ್ನು ಗುಣವಂತರಾದ ಬ್ರಾಹ್ಮಣರಿಗೇ ಕೊಡಬೇಕು. ಅದಕಾರಣ ನಾನೇ ಗುಣಗಳನ್ನು ಪರೀಕ್ಷಿಸಿ ಬ್ರಾಹ್ಮಣರನ್ನು ಕಳುಹಿಸುವೆನು" ಎಂದು,

ಪ್ರತಿಹಾರಿ—ಆರ್ಯನ ಅಪ್ಪಣೆಯಂತಾಗಲಿ (ಎಂದು ಹೊರಟುಹೋದನು)

ಚಾಣ—ಶಾರ್ಙರವ ! ಶಾರ್ಙರವ !

ಶಿಷ್ಯಂ—(ಪ್ರವೇಶಿಸಿ) ಗುರುಗಳೇ ! ಏನಪ್ಪಣೆ ?

ಚಾಣ—ವಿಶ್ವಾವಸು ಮೊದಲಾದ ಆ ಮೂರುಮಂದಿ ಅಣ್ಣತಮ್ಮಂದಿರಿಗೂ, ವೃಷಲನಿಂದ ಒಡವೆಗಳನ್ನು ತೆಗೆದುಕೊಂಡು ನನ್ನನ್ನು ನೋಡಬೇಕೆಂದೂ ನಾನು ಹೇಳಿದೆನೆಂದು ತಿಳುಹಿಸು.

ಶಿಷ್ಯಂ—ಹಾಗೆಯೇ ಆಗಲಿ (ಎಂದು ಹೊರಟುಹೋದನು)

ಚಾಣ—ಇದು ಕಡೆಯಲ್ಲಿ ಬರೆಯತಕ್ಕುದಾಯಿತು ಮೊದಲನೆಯದು ಏನು? (ಎಂದು ಯೋಚಿಸಿ) ಆಹ! ತಿಳಿಯಿತು ನಮ್ಮ ಗೂಢಚಾರರಿಂದ ತಿಳಿದಿರುವೆನಷ್ಟೆ. ಹೇಗೆಂದರೆ:—ಆ ಮ್ಲೇಚ್ಛರಾಜರ ಮಧ್ಯದಲ್ಲಿ ಐದು ಮಂದಿಯೂ ನಿರತಿಶಯವಾದ ಸ್ನೇಹದಿಂದ ರಾಕ್ಷಸನನ್ನು ಅನುವರ್ತಿಸಿರುವರು. ಅವರು ಯಾರೆಂದರೆ,—

ವೃ॥ ನರಸಿಹ್ಮಂ ಸಿಹ್ಮನಾದಂ ಮಲಯನೃಪತಿ ಕೌಲೂತಕಂ
ಚಿತ್ರವರ್ಮಂ । ಧರಣೀಶಂ ಪುಷ್ಕರಾಕ್ಷಂ ರಿಪುಮದದಮ
ನಂ ಸೈಂಧವಂ ಸಿಂಧುಷೇಣಂ ॥ ತುರಗಾನೀಕಾಧಿಪಂ
ಪಾರಸಿಯಧಿಪತಿಯುಂ ಪಂಚಮಂ ಮೇಘನಾದಂ । ಭರ
ದೀನಾಮಂಗಳಂ ನಾಂಬರೆವೆನಳಿಸಲಿನ್ನೀಗಳಾಚಿತ್ರಗುಪ್ತಂ

ಅಥವಾ ಬರೆಯುವುದಿಲ್ಲ. ಮೊದಲು ತಿಳಿಯದಂತೆಯೇ ಇರಲಿ.

(ಎಂದು ಬರೆದಂತೆ ನಟಿಸಿ) ಶಾರ್ಙ್ಗರವ ? ಶಾರ್ಙ್ಗರವ !

ಶಿಷ್ಯಂ—ಗುರುಗಳೇ ! ಏನಪ್ಪಣೆ ?

ಚಾಣ—ಮಗೂ ! ಎಷ್ಟು ಪ್ರಯತ್ನಿಸಿ ಬರೆದರೂ ಶ್ರೋತ್ರಿಯಾಕ್ಷರಗಳು ಸ್ಫುಟವಾಗಿರುವುದಿಲ್ಲ. ಆದುದರಿಂದ ನಾನು ಹೇಳಿದೆನೆಂದು ಸಿದ್ಧಾರ್ಥಕನಿಗೆ ತಿಳುಹಿಸು "-ಯಾವನೋ ಯಾವನಿಗೋ ತಾನು ಹೇಳಬೇಕು-ಎಂದು ಇದೇ ಅಕ್ಷರಗಳನ್ನು ಮೇಲಣ ವಿಳಾಸವಿಲ್ಲದಂತೆ ಶಕಟ

ದಾಸನಿಂದ ಬರೆಯಿಸಿಕೊಂಡು ನನ್ನ ಬಳಿಗೆ ಬರಬೇಕು. ಚಾಣಕ್ಯನು ಬರೆಯಿಸುವನೆಂದು ಅವನಿಗೆ ಹೇಳಕೂಡದು" ಎಂದು.

ಶಿಷ್ಯಂ—ಹಾಗೆಯೇ (ಎಂದು ಹೊರಟುಹೋದನು)

ಚಾಣ—(ಸ್ವಗತಂ) ಭಾಪು! ಮಲಯಕೇತುವನ್ನು ಗೆದ್ದೆನು.

(ಸಿದ್ಧಾರ್ಥಕನು ಕಾಗದವನ್ನು ತೆಗೆದುಕೊಂಡು ಪ್ರವೇಶಿಸಿ)

ಜಯವಾಗಲಿ ಆರ್ಯನಿಗೆ, ಇದೋ! ಶಕಟದಾಸನು ಬರೆದ ಕಾಗದವು

ಚಾಣ—(ಕಾಗದವನ್ನು ತೆಗೆದುಕೊಂಡು) ಆಹ! ಅಕ್ಷರಗಳು ಎಷ್ಟು ಅಂದವಾಗಿರುವುವು? (ಓದಿಕೊಂಡು) ಭದ್ರನೇ! ಈ ಮುದ್ರೆಯಿಂದ ಇದನು ಮುದ್ರಿಸು.

ಸಿದ್ಧಾ—(ಹಾಗೆಮಾಡಿ) ಆರ್ಯನೇ! ಮುದ್ರಿಸಿದೆನು. ಮುಂದೇನುಮಾಡಲಿ?

ಚಾಣ—ಅಯ್ಯಾ! ಆಪ್ತರು ಮಾಡಬೇಕಾದ ಒಂದು ಕೆಲಸವನ್ನು ನಿನ್ನಿಂದ ಮಾಡಿಸಬೇಕೆಂದಿರುವೆನು.

ಸಿದ್ಧಾ—(ಸಂತೋಷದಿಂದ) ಆರ್ಯನೇ! ಅನುಗೃಹೀತನಾದೆನು. ಈ ಭೃತ್ಯನಿಂದ ಆರ್ಯನಿಗೇನಾಗಬೇಕೆಂಬುದನ್ನು ಆಜ್ಞಾಪಿಸಬೇಕು?

ಚಾಣ—ಮೊದಲು ವಧ್ಯಸ್ಥಾನಕ್ಕೆ ಹೋಗಿ ಆ ಘಾತುಕರಿಗೆ ಕೋಪದಿಂದ ಬಲಗಣ್ಣನ್ನು ಮಿಟಿಕಿಸುವ ಸನ್ನೆಯನ್ನು ತಿಳುಹಬೇಕು. ಬಳಿಕ ಅವರು ಆ ಸನ್ನೆಯನ್ನು ತಿಳಿದು ಭಯವ್ಯಾಜದಿಂದ ಅತ್ತಿತ್ತ ಓಡಿಹೋಗಲು, ಶಕಟದಾಸನನ್ನು ವಧ್ಯಸ್ಥಾನದಿಂದ ಹೊರಡಿಸಿಕೊಂಡು ಹೋಗಿ ರಾಕ್ಷಸನೊಡನೆ ಸೇರಿಸಬೇಕು. ಪ್ರಿಯಮಿತ್ರನ ಪ್ರಾಣರಕ್ಷಣದಿಂದ ಸಂತೋಷಗೊಂಡ ಅವನಿಂದ ಬಹುಮಾನವನ್ನು ಪಡೆಯಬೇಕು. ಕೆಲವು ಕಾಲ ರಾಕ್ಷಸನನ್ನೇ ಸೇವಿಸಿಕೊಂಡಿರಬೇಕು, ಬಳಿಕ ಶತ್ರುಗಳು ಸಮೀಪಿಸಿದಾಗ ಈ ಪ್ರಯೋಜನವನ್ನು ಮಾಡಬೇಕು (ಎಂದು ಕಿವಿಯಲ್ಲಿ ಹೇಳುವನು)

ಸಿದ್ಧಾ—ಆರ್ಯನಾಜ್ಞೆಯಂತಾಗಲಿ.

ಚಾಣ—ಶಾರ್ಙರವ!

ಶಿಷ್ಯಂ—ಗುರುಗಳೇ! ಏನಪ್ಪಣೆ?

ಚಾಣ—ಮಗು! ರಾಕ್ಷಸಪ್ರೇರಿತನಾಗಿ ವಿಷಕನ್ಯೆಯಿಂದ ಪರ್ವತೇಶ್ವರನನ್ನು ಸಂಹರಿಸಿದ ಜೀವಸಿದ್ಧಿಯೆಂಬ ಕ್ಷಪಣಕನಲ್ಲಿ ಅದೇ ದೋಷವನ್ನು ಹೊರಪಡಿಸಿ ಮಾನಭಂಗವಂ ಮಾಡಿ ಪಟ್ಟಣದಿಂದ ಹೊರಡಿಸುವಂತೆ ವೃಷಲನಾಜ್ಞಾಪಿಸಿರುವನೆಂಬ ನಮ್ಮ ಮಾತನ್ನು ಕಾಲಪಾಶಕನಿಗೂ ದಂಡಪಾಶಕನಿಗೂ ತಿಳುಹಿಸು.

ಶಿಷ್ಯಂ—ಅಪ್ಪಣೆ. (ಎಂದು ಹೊರಡುವನು).

ಚಾಣ—ಮಗೂ! ನಿಲ್ಲುನಿಲ್ಲು, ಆ ಇನ್ನೊಬ್ಬ ಶಕಟದಾಸನೆಂಬ ಗಣದಿಗನು ರಾಕ್ಷಸಪ್ರೇರಿತನಾಗಿ ಯಾವಾಗಲೂ ನಮ್ಮಗಳ ಶರೀರನಾಶಕ್ಕಾಗಿಯೇ ಪ್ರಯತ್ನವನ್ನು ಮಾಡುತ್ತಿರುವನಷ್ಟೆ? "ಅದೇ ದೋಷವನ್ನು ಹೊರಪಡಿಸಿ ಅವನನ್ನೂ ಶೂಲಕ್ಕೆ ಏರಿಸಬೇಕು. ಮತ್ತು ಅವನ ಮನೆಯವರನ್ನೂ ಸೆರೆಯಲ್ಲಿಡಬೇಕು" (ಎಂದು ಹೇಳು)

ಶಿಷ್ಯಂ—ಹಾಗೆಯೇ ಆಗಲಿ (ಎಂದು ಹೇಳಿಟುಹೋದನು).

ಚಾಣ—(ಸ್ವಗತಂ-ಚಿಂತೆಯನ್ನು ನಟಿಸಿ)-ದುರಾತ್ಮನಾದ ರಾಕ್ಷಸನನ್ನು ಗ್ರಹಿಸಲಾದೀತೆ?

ಸಿದ್ಧಾ—ಆರ್ಯನೇ! ಗ್ರಹಿಸಿದೆನು.

ಚಾಣ—(ಸಂತೋಷದಿಂದ ಆತ್ಮಗತಂ) ಭಾಪು! ರಾಕ್ಷಸನನ್ನು ಗೆದ್ದೆನು.

(ಪ್ರಕಾಶಂ) ಅಯ್ಯಾ! ಏನನ್ನು ಗ್ರಹಿಸಿದೆ?

ಸಿದ್ಧಾ—ಆರ್ಯನಾಜ್ಞೆಯನ್ನು, ಅದರಿಂದ ಕಾರ್ಯಸಿದ್ಧಿಗಾಗಿ ತೆರಳುವೆನು.

ಚಾಣ—(ಮುದ್ರೆಯುಂಗುರದೊಡನೆ ಕಾಗದವನ್ನು ಕೊಟ್ಟು) ನಿನ್ನ ಕಾರ್ಯವು ಸಿದ್ಧಿಸಲಿ, ಹೋಗಿಬಾ.

ಸಿದ್ಧಾ—ಅಪ್ಪಣೆ (ಎಂದು ಹೊರಟುಹೋದನು).

(ಶಿಷ್ಯಂ ಪ್ರವೇಶಿಸಿ) ಗುರುಗಳೇ! ಸ್ವಾಮಿಯಾದ ಚಂದ್ರಗುಪ್ತನ ಅಪ್ಪಣೆಯನ್ನು ನೆರವೇರಿಸುವೆವೆಂದು ಕಾಲಪಾಶಕನೂ, ದಂಡಪಾಶಕನೂ ಆರ್ಯನನ್ನು ಬೇಡಿಕೊಳ್ಳುವರು

ಚಾಣ—ಒಳ್ಳೆಯದು ಮಗು! ರತ್ನವ್ಯಾಪಾರಿಯಾದ ಚಂದನದಾಸಸೆಟ್ಟಿಯನ್ನು ಈಗಲೇ ನೋಡಲಪೇಕ್ಷಿಸುವೆನು.

ಶಿಷ್ಯಂ—ಹಾಗೆಯೇ ಆಗಲಿ (ಎಂದು ಹೊರಟು ಚಂದನದಾಸನೊಡನೆ ಪ್ರವೇಶಿಸಿ) ಸೆಟ್ಟರೇ! ಇತ್ತಿತ್ತ ಬರಬೇಕು.

ಚಂದನದಾಸ—(ಆತ್ಮಗತಂ)

ಕಂ || ಚಣಕಸುತಂ ಕರೆಯಿಸೆ ನಿ |
ರ್ಘೃಣನಾಗಳೆ ದೋಷವಿಲ್ಲದಿಹ ಜನಕುಂ ತ ||
ಲ್ಲಣಿಪುದು ಮನ ವಿಂತಿರಲೀ |
ಗೆಣಿಸುವುದೇಂ ದೋಷಿಯೆನಿಸಿ ದೆನ್ನಯ ಗತಿಯುಂ ||

ಆದುದರಿಂದ "ಈ ಚಾಣಿಕ್ಯಹತಕನು ಯಾವಾಗಲಾದರೂ ನಮ್ಮ ಮನೆಯನ್ನು ಶೋಧಿಸಬಹುದು. ಆಗ ಸಿದ್ಧರಾಗಿದ್ದು ಎಚ್ಚರದಿಂದ ಯಜಮಾನನಾದ ಅಮಾತ್ಯರಾಕ್ಷಸನ ಗೃಹಜನವನ್ನು ಕಾಪಾಡಿರಿ. ನನಗೆ ಏನಾದರದಾಗಲಿ" ಎಂದು ನನ್ನ ಮನೆಯಲ್ಲಿರುವ ಧನಸೇನಪ್ರಮುಖರೆಲ್ಲರಿಗೂ ಹೇಳಿರುವೆನು.

ಶಿಷ್ಯಂ—ಆರ್ಯ್ಯ ಸೆಟ್ಟರೇ! ಇತ್ತ ಬರಬೇಕು (ಎಂದಿಬ್ಬರೂ ಬರುವರು) ಗುರುಗಳೇ! ಇದೋ ಚಂದನದಾಸಸೆಟ್ಟಿಯು.

ಚಂದ—ಆರ್ಯನಿಗೆ ಜಯವಾಗಲಿ.

ಚಾಣ—(ನೋಡಿ) ಸೆಟ್ಟರೆ! ಸುಖಾಗಮನವೆ? ಈ ಪೀಠದಲ್ಲಿ ಕುಳಿತುಕೊಳ್ಳಿರಿ.

ಚಂದ—(ನಮಸ್ಕರಿಸಿ) ಆರ್ಯನೇ! ಅನುಚಿತವಾದ ಉಪಚಾರವು ಮನಸ್ಸಿಗೆ ತಿರಸ್ಕಾರಕ್ಕಿಂತಲೂ, ಹೆಚ್ಚಾದ ದುಃಖವನ್ನುಂಟುಮಾಡುವುದೆಂದು ಆರ್ಯನಿಗೇನು ತಿಳಿಯದೆ? ಆದುದರಿಂದ ಇಲ್ಲಿಯೇ ಯೋಗ್ಯವಾದ ನೆಲದಲ್ಲಿ ಕುಳಿತುಕೊಳ್ಳುವೆನು.

ಚಾಣ—ಅಯ್ಯಾ ಸೆಟ್ಟಿಯೇ! ಹಾಗಲ್ಲ. ನಮ್ಮಂತವರಿಂದ ನಿನಗೆ ಇದು ಉಚಿತವೇ ಸರಿ. ಆದುದರಿಂದ ಪೀಠದಲ್ಲಿ ಕುಳಿತುಕೊ

ಚಂದ—(ಸ್ವಗತಂ) ಈ ದುಷ್ಟನು ಏನೋ ಪೀಠಿಕೆಯನ್ನು ಹಾಕಿದನು.

(ಪ್ರಕಾಶಂ) ಆರ್ಯನ ಆಜ್ಞೆಯಂತಾಗಲಿ. (ಎಂದು ಕುಳಿತುಕೊಳ್ಳುವನು).

ಚಾಣ—ಅಯ್ಯಾ ಚಂದನದಾಸಸೆಟ್ಟಿಯೇ! ನಿನ್ನ ವ್ಯಾಪಾರಗಳ ವೃದ್ಧಿಲಾಭಗಳು ಬೆಳೆಯುತ್ತಿರುವುವೆ?

ಚಂದ—(ಸ್ವಗತಂ) ಈ ಅತ್ಯಾದರವು ಶಂಕಿಸತಕ್ಕುದಾಗಿರುವುದು. (ಪ್ರಕಾಶಂ) ಅಹುದು. ಆರ್ಯನನುಗ್ರಹದಿಂದ ನನ್ನ ವ್ಯಾಪಾರವು ಕುಂದಿಲ್ಲದೆ ನಡೆಯುತ್ತಿರುವುದು.

ಚಾಣ—ಈ ಚಂದ್ರಗುಪ್ತನ ದೋಷಗಳು ಈಗ ಪ್ರಜೆಗಳಲ್ಲಿ ಪೂರ್ವರಾಜರ ಗುಣಸ್ಮರಣೆಯನ್ನೇನೂ ಮಾಡಿಸುವುದಿಲ್ಲವಷ್ಟೆ?

ಚಂದ—(ಕಿವಿಯನ್ನು ಮುಚ್ಚಿಕೊಂಡು) ಶಿವ-ಶಿವ. ಶರತ್ಕಾಲದ ರಾತ್ರಿಯಲ್ಲಿ ಮೂಡುವ ಚಂದ್ರನಿಂದೆಂತೋ, ಅಂತು ಚಂದ್ರಗುಪ್ತನಿಂದ ಪ್ರಜೆಗಳೆಲ್ಲರೂ ಬಹುಳ ಸಂತುಷ್ಟರಾಗಿ ಇರುವರು.

ಚಾಣ—ಅಯ್ಯಾ ಸೆಟ್ಟಿಯೆ! ಹೀಗಿದ್ದರೆ, ಪ್ರೀತರಾದ ಪ್ರಜೆಗಳಿಂದ ರಾಜರು ಪ್ರತಿಪ್ರಿಯವನ್ನಪೇಕ್ಷಿಸುವರು.

ಚಂದ—ಆರ್ಯನೆ! ನನ್ನಿಂದ ಸ್ವಾಮಿಗೆ ಯಾವುದು ಎಷ್ಟುಬೇಕೋ? ಅಪ್ಪಣೆಯಾಗಬೇಕು?

ಚಾಣ—ಅಯ್ಯಾ ಸೆಟ್ಟಿಯೇ! ಇದು ಚಂದ್ರಗುಪ್ತರಾಜ್ಯವು. ನಂದರಾಜ್ಯವಲ್ಲ ಏಕೆಂದರೆ:-ದ್ರವ್ಯಾಭಿಲಾಷಿಯಾದ ನಂದನಿಗೆ ಅರ್ಥಸಂಬಂಧವು ಪ್ರೀತಿಯನ್ನುಂಟುಮಾಡುತ್ತಿದ್ದಿತು. ಚಂದ್ರಗುಪ್ತನಿಗಾದರೋ ನಿಮ್ಮಗಳ ನೆಮ್ಮದಿಯೆ ಪ್ರೀತಿಕರವಾದುದು.

ಚಂದ—(ಸಂತೋಷದಿಂದ) ಆರ್ಯನೆ! ಅನುಗ್ರಹಿಸಲ್ಪಟ್ಟೆನು

ಚಾಣ—ಅಯ್ಯಾ ಸೆಟ್ಟಿಯೇ! ಆ ನೆಮ್ಮದಿಯು ಹೇಗೆ ಉಂಟಾಗುವುದೆಂದು ನೀನು ನಮ್ಮನ್ನು ಕೇಳಬೇಕಲ್ಲವೆ?

ಚಂದ—ಆರ್ಯನಾಜ್ಞಾಪಿಸಬೇಕು.

ಚಾಣ—ಮುಖ್ಯವಾಗಿ ರಾಜನಿಗೆ ವಿರುದ್ಧವಲ್ಲದ ವೃತ್ತಿಯಲ್ಲಿರಬೇಕು.

ಚಂದ—ಆರ್ಯನೇ! ಯಾವ ನಿರ್ಭಾಗ್ಯನು ರಾಜವಿರೋಧಿಯೆಂದು ಸ್ವಾಮಿಗೆ ತಿಳಿದಿರುವುದು?

ಚಾಣ—ಮೊದಲು ನೀನೇ,

ಚಂದ—(ಕಿವಿಗಳನ್ನು ಮುಚ್ಚಿಕೊಂಡು) ಶಿವ-ಶಿವ, ಹುಲ್ಲಿಗೆ ಬೆಂಕಿಯೊಡನೆ ವಿರೋಧವೆಂದರೇನು?

ಚಾಣ—ಏನೆ? ನೀನೀಗಲೂ ರಾಜವಿರೋಧಿಯಾದ ಅಮಾತ್ಯರಾಕ್ಷಸನ ಮನೆಯುವರನ್ನು ನಿನ್ನಮನೆಯಲ್ಲಿಟ್ಟುಕೊಂಡು ಕಾಪಾಡುತ್ತಿರುವುದು.

ಚಂದ—ಆರ್ಯನೇ! ಇದು ಸುಳ್ಳು, ಯಾವನೋ ತಿಳಿಯದವನು ಸ್ವಾಮಿಗೆ ಹೇಳಿರಬಹುದು,

ಚಾಣ—ಅಯ್ಯಾ ಶೆಟ್ಟಿಯೆ! ಹೆದರಬೇಡ. ಪೂರ್ವ ರಾಜಪುರುಷರು, ಭೀತಿಗೊಂಡು ಪಟ್ಟಣಿಗರು ಸಮ್ಮತಿಸದಿದ್ದರೂ ಅವರ ಮನೆಗಳಲ್ಲಿ ತಮ್ಮ

ಗೃಹಜನವನ್ನಿಟ್ಟು ದೇಶಾಂತರಕ್ಕೆ ಹೋಗುವುದುಂಟು ಅದನ್ನು ಮರೆಮಾಜುವುದು ದೋಷವು.

ಚಂದ—ಆರ್ಯನೆ! ಅಮಾತ್ಯರಾಕ್ಷಸನ ಗೃಹಜನವು ಆಕಾಲದಲ್ಲಿ ನನ್ನ ಮನೆಯಲ್ಲಿದ್ದಿತು ಇದು ನಡೆದುದು ಹೀಗೆ

ಚಾಣ—ಮೊದಲು ಸುಳ್ಳೆಂದೂ, ಈಗ ಇದ್ದಿತೆಂದೂ ಹೇಳುವ ನಿನ್ನ ಮಾತುಗಳೇ ಪರಸ್ಪರ ವಿರೋಧಿಗಳಾಗಿರುವವು.

ಚಂದ—ಇಷ್ಟೇ ನನ್ನ ಮಾತಿನ ವ್ಯತ್ಯಾಸವು

ಚಾಣ—ಅಯ್ಯಾ ಸೆಟ್ಟಿಯೇ! ಚಂದ್ರಗುಪ್ತರಾಜನು ವ್ಯತ್ಯಾಸವನ್ನು ಸೈರಿಸತಕ್ಕವನಲ್ಲ. ಆದುದರಿಂದ ರಾಕ್ಷಸನ ಗೃಹಜನವನ್ನೊಪ್ಪಿಸು. ನಿನ್ನಲ್ಲಿ ವ್ಯತ್ಯಾಸವಿಲ್ಲದಿರಲಿ.

ಚಂದ—ಆರ್ಯನೇ! ರಾಕ್ಷಸನಮನೆಯುವರು ನಮ್ಮ ಮನೆಯಲ್ಲಿ ಮುನ್ನು ಇದ್ದರೆಂದು ವಿಜ್ಞಾಪಿಸುವೆನಷ್ಟೆ?

ಚಾಣ—ಆದರೆ ಈಗೆಲ್ಲಿಗೆ ಹೋದರು?

ಚಂದ—ನನಗೆ ತಿಳಿಯದು.

ಚಾಣ—(ನಕ್ಕು) ಏನು? ನಿನಗೆ ತಿಳಿಯದೋ? ಅಯ್ಯಾ ಸೆಟ್ಟಿಯೇ! ಭಯವು ತಲೆಯಮೇಲಿರುವುದು, ಅದಕ್ಕೆ ಪ್ರತೀಕಾರವು ಬಹಳ ದೂರದಲ್ಲಿರುವುದು.

ಚಂದನ—(ಸ್ವಗತಂ)

ಕಂ॥ ನೀರೆ ಸಮೀಪದೊಳಿಲ್ಲಂ।
ಭೈರವಿಪುದು ಮುಗಿಲ ಮೊಳಗಿ ದಾಗಸ ದೆಡೆಯೊಳ್॥
ಆರಯೆ ತುಷಾರಗಿರಿಯೊಳು।
ದಾರಮುಹೌಷಧಿಗಳಿರ್ಕು ಮುರಗಂ ಶಿರದೊಳ್॥

ಚಾಣಕ್ಯಂ—ಮತ್ತು ನಂದರನ್ನು ಚಾಣಕ್ಯನಂತೆ (ಎಂದರ್ಥೋಕ್ತಿಯಲ್ಲಿ ಲಜ್ಜೆಯನ್ನು ನಟಿಸಿ) ಚಂದ್ರಗುಪ್ತನನ್ನು ಅಮಾತ್ಯರಾಕ್ಷಸನು ಧ್ವಂಸಗೊಳಿಸುವನೆಂದು ತಿಳಿಯಬೇಡ. ನೋಡು.

ವೃ|| ಅಸದೃಶನೀತಿ ಶೌರ್ಯಬಲಧೈರ್ಯ ಪರಾಕ್ರಮ ವಕ್ರನಾಸ ಮುಂ। ಖ್ಯಸಚಿವರಿಂದಮುಂ ನೆಲೆಯು ನೊಂದಿದೊ ಆವುದು ನಂದರಿರ್ದೊಡಂ। ವಸುಮತಿಯುಂ ಮುದಂಗೊಳಿಸುವಾ ನೃಪಲಕ್ಷ್ಮಿಯ ನಿಂದು ಮೌರ್ಯನಿಂ। ದೆ ಸೆಳೆಯಲಾವನುಜ್ಜುಗಿಪ ನಿಂದುವಿನಿಂ ಸೆಳೆವಂತೆ ಜೊನ್ನಮಂ||

ಮತ್ತಂ || ಕುಂಜರ ಶೋಣಿತ ಪಾನದೆ,

(ಎಂದು ಹಿಂದಣಪದ್ಯವನ್ನು ಹೇಳುವನು.)

ಚಂದನ—(ಸ್ವಗತಂ) ಫಲಕಾರಿಯಾದುದರಿಂದ ಇವನ ವಿಕತ್ಥನವು ಶೋಭಿಸುವುದು.

(ತೆರೆಯಲ್ಲಿ ಗದ್ದಲವಾಗುವುದು)

ಚಾಣ—ಶಾರ್ಙ್ಗರವ! ಇದೇನು? ತಿಳಿದುಕೊಂಡು ಬಾ.

ಶಿಷ್ಯಂ—ಅಪ್ಪಣೆ (ಎಂದು ಹೋಗಿ ಮರಳಿ ಬಂದು) ಗುರುಗಳೇ! ರಾಜಾಪಥ್ಯಕಾರಿಯಾದ ಜೀವಸಿದ್ಧಿಯೆಂಬ ಕ್ಷಪಣಕನನ್ನು ಚಂದ್ರಗುಪ್ತಮಹಾರಾಜನಪ್ಪಣೆಯಂತೆ ಅವಮಾನಗೊಳಿಸಿ ಪಟ್ಟಣದಿಂದ ಹೊರಡಿಸುವರು.

ಚಾಣ—ಅಯ್ಯೋ! ಕ್ಷಪಣಕನೇ! ಅಥವಾ ರಾಜದ್ರೋಹಕ್ಕೆ ತಕ್ಕ ಫಲವನ್ನನುಭವಿಸು.

ಅಯ್ಯಾ! ಚಂದನದಾಸಸೆಟ್ಟಿಯೆ! ರಾಜನು ದ್ರೋಹಿಗಳನ್ನು ಹೀಗೆ ಕ್ರೂರವಾಗಿ ದಂಡಿಸುವನು. ಆದುದರಿಂದ ಮಿತ್ರನ ಮಾತನ್ನು ಪಥ್ಯವಾಗಿ ತಿಳಿ. ರಾಕ್ಷಸನ ಮನೆಯವರನ್ನು ಒಪ್ಪಿಸು. ವಿಚಿತ್ರವಾದ ರಾಜಪ್ರಸಾದವನ್ನು ಸ್ಥಿರವಾಗನುಭವಿಸು.

ಚಂದ—ಅಮಾತ್ಯನ ಗೃಹಜನವು ನಮ್ಮ ಮನೆಯಲ್ಲಿಲ್ಲ.

( ತೆರೆಯಲ್ಲಿ ಮರಳಿ ಗದ್ದಲವಾಗುವುದು. )

ಚಾಣ—ಶಾರ್ಙರವ! ಅದೇನು? ನೋಡು.

ಶಿಷ್ಯಂ—(ಹೋಗಿ ಬಂದು) ಗುರುಗಳೆ! ಇವನೂ ರಾಜದ್ರೋಹಿಯೇ. ಶಕಟ ದಾಸನೆಂಬ ಗಣದಿಗನು. ಶೂಲಕ್ಕೇರಿಸುವುದಕ್ಕಾಗಿ ಇವನನ್ನು ಕರೆದು ಕೊಂಡುಹೋಗುತ್ತಿರುವರು.

ಚಾಣ—ತನ್ನ ಕರ್ಮಫಲವನ್ನನುಭವಿಸಲಿ. ಅಯ್ಯಾ ಸೆಟ್ಟಿಯೇ! ಈ ರಾಜನು ರಾಜದ್ರೋಹಿಗಳಿಗೆ ಹೀಗೆ ಕ್ರೂರದಂಡವನ್ನು ವಿಧಿಸುವನು. ನೀನು ರಾಕ್ಷಸನ ಮಡದಿಯನ್ನು ಮರೆಮಾಚಿರುವುದನ್ನು ಸಹಿಸುವುದಿಲ್ಲ. ಆದುದರಿಂದ ಪರಕಳತ್ರವನ್ನೊಪ್ಪಿಸಿ ನಿನ್ನ ಕಳತ್ರವನ್ನೂ, ಜೀವವನ್ನೂ ಕಾಪಾಡಿಕೊ.

ಚಂದ—ಆರ್ಯನೇ! ನನ್ನನ್ನು ಏನು ಹೆದರಿಸುವೆ? ಅಮಾತ್ಯನ ಗೃಹಜನ ವನ್ನು ನನ್ನ ಮನೆಯಲ್ಲಿದ್ದರೂ ಕೊಡುವುದಿಲ್ಲ. ಇಲ್ಲದುದನ್ನು ಹೇಳು ವುದೇನು.

ಚಾಣ—ಚಂದನದಾಸನೇ! ಇದೇ ನಿಶ್ಚಯವೊ?

ಚಂದ—ಅಹುದು, ಇದೇ ನನ್ನ ನಿಶ್ಚಯವು.

ಚಾಣ—(ಸ್ವಗತಂ) ಭಾಪು! ಚಂದನದಾಸನೇ! ಭಾಪು!

ಕಂ॥ ಪರರಂ ಸಮರ್ಪಿಪುದರಿಂ ।
ದೊರೆಯುತ್ತಿರಲ್ ಸುಲಭವಾಗಿ ಸರ್ವಾರ್ಥಂಗಳ್ ॥
ವರಶಿಬಿಯಲ್ಲದೊಡೀ ದು ।
ಷ್ಕರವಾದುದ ನಾವನೆಸಪ ನೀ ದುಷ್ಕಲಿಯೊಳ್ ॥

(ಪ್ರಕಾಶಂ) ಇದೇ ನಿಶ್ಚಯವೊ?

ಚಂದ—ಅಹುದು, ಇದೇ ನಿಶ್ಚಯ.

ಚಾಣ—(ಕೋಪದಿಂದ) ದುರಾತ್ಮನಾದ ದುಷ್ಟವಣಿಜನೇ! ನಿಲ್ಲು. ಆದರೆ ರಾಜಕ್ರೋಧಫಲವನ್ನನುಭವಿಸು.

ಚಂದನ—ಸಿದ್ಧನಾಗಿರುವೆನು, ಆರ್ಯನು ತನಗಧಿಕಾರವಿದ್ದಷ್ಟು ಆಜ್ಞಾಪಿಸಬಹುದು.

ಚಾಣ—ಶಾರ್ಙ್ಗರವ! ಈ ಕೆಟ್ಟವರ್ತಕನನ್ನು ಬೇಗನೆ ನಿಗ್ರಹಿಸುವಂತೆ ನಾನು ಹೇಳಿದೆನೆಂದು ಕಾಲಪಾಶಕನಿಗೂ, ದಂಡಪಾಶಕನಿಗೂ ತಿಳುಹಿಸು. ಅಥವಾ ಇರಲಿ. ನಾನು ವೃಷಲನಿಗೆ ತಿಳುಹಿಸುವವರೆಗೂ ಇವನ ಮನೆಯನ್ನು ಮುಟ್ಟುಗೋಲು ಹಾಕಿ ಸಕುಟುಂಬವಾಗಿ ಹಿಡಿದು ಸೆರೆಯಲ್ಲಿಟ್ಟು ನೋಡಿಕೊಳ್ಳಬೇಕೆಂದು ದುರ್ಗಪಾಲಕನಿಗೂ, ವಿಜಯಪಾಲಕನಿಗೂ ಹೇಳು. ಆಮೇಲೆ ವೃಷಲನೇ ಇವನಿಗೆ ಪ್ರಾಣಾಂತವಾದ ಶಿಕ್ಷೆಯನ್ನು ವಿಧಿಸುವನು.

ಶಿಷ್ಯಂ—ಉಪಾಧ್ಯಾಯರಪ್ಪಣೆಯಂತಾಗಲಿ. ಅಯ್ಯಾ ಸೆಟ್ಟಿಯೋ! ಇತ್ತಿತ್ತ ಬರಬೇಕು.

ಚಂದನ—ಆರ್ಯನೇ! ಇದೋ ಬರುವೆನು. (ಆತ್ಮಗತಂ) ದೈವಯೋಗದಿಂದ ಮಿತ್ರನ ಕಾರ್ಯಕ್ಕಾಗಿ ನನಗೆ ವಿನಾಶವು. ಪುರುಷದೋಷದಿಂದಲ್ಲ. (ಎಂದು ಶಿಷ್ಯನೊಡನೆ ಹೊರಟು ಹೋದನು).

ಚಾಣ—(ಸಂತೋಷದಿಂದ) ಭಾಪು! ಈಗ ರಾಕ್ಷಸನು ಸಿಕ್ಕಿದನು.

ಏಕೆಂದರೆ:—

ಕಂ|| ಇವನೆಂತವನಾಪದದೊಳ್ |
ತನಕದೆ ಪಗೆಯಂತೆ ಹಳಿದು ಹರಣವನೀವಂ ||
ಅವನೀತನ ವಿಪದದೊಳಂ |
ತುನೆ ನಿಜದಿಂ ತನ್ನ ಹರಣನುಂ ಕೊಟ್ಟಪನೈ ||

(ತೆರೆಯಲ್ಲಿ ಕಲಕಲವಾಗುವುದು)

ಚಾಣ—ಶಾರ್ಙ್ಗರವ ! ಶಾರ್ಙ್ಗರವ !

ಶಿಷ್ಯಂ—(ಬಂದು) ಗುರುಗಳೇ ! ಏನಪ್ಪಣೆ ?

ಚಾಣ—ಇದೇನು ಗದ್ದಲ ?

ಶಿಷ್ಯಂ—(ನೋಡಿ) ಗುರುಗಳೇ! ಈ ಸಿದ್ಧಾರ್ಥಕನು ಶೂಲಕ್ಕೇರಿಸಲ್ಪಡುತ್ತಿದ್ದ ಶಕಟದಾಸನನ್ನು ವಧ್ಯಸ್ಥಾನದಿಂದ ಹೊರಡಿಸಿಕೊಂಡು ಹೋದನಂತೆ.

ಚಾಣ—(ಸ್ವಗತಂ) ಭಾಪು! ಸಿದ್ಧಾರ್ಥಕನೆ! ಚೆನ್ನಾಗಿ ಕಾರ್ಯವನ್ನಾರಂಭಿಸಿದೆ. (ಪ್ರಕಾಶಂ) ಏನು ? ಬಲಾತ್ಕಾರದಿಂದ ಹೊರಡಿಸಿಕೊಂಡು ಹೋದನೆ ? (ಕೋಪಗೊಂಡಂತೆ ನಟಿಸಿ) ಮಗೂ ! ಬೇಗನೆ ಬೆನ್ನಟ್ಟಿಹೋಗಿ ನಿಗ್ರಹಿಸಿಯಾಗಲಿ, ಸಂತೈಸಿಯಾಗಲಿ ಸಿದ್ಧಾರ್ಥಕನನ್ನು ತರಬೇಕೆಂದು ಭಾಗುರಾಯಣನಿಗೆ ತಿಳುಹಿಸು.

ಶಿಷ್ಯಂ—ಹಾಗೆಯೇ (ಎಂದು ಹೋಗಿ ತಿರುಗಿ ಬಂದು ದುಃಖದಿಂದ) ಉಪಾಧ್ಯಾಯರೇ ! ಕಷ್ಟವು ಕಷ್ಟವು, ಆ ಭಾಗುರಾಯಣನೂ ಹೊರಟುಹೋಗಿರುವನು.

ಚಾಣ—(ಸ್ವಗತಂ) ಕಾರ್ಯಸಿದ್ಧಿಗಾಗಿ ತೆರಳಲಿ.

(ಪ್ರಕಾಶಂ) ಮಗೂ ! ದುರಾತ್ಮನಾದ ಭಾಗುರಾಯಣನನ್ನು ಬೇಗ ಹಿಂಬಾಲಿಸಿ ಹೋಗಿ ಹಿಡಿದುತರುವಂತೆ ಭದ್ರಭಟ, ಪುರುಷದತ್ತ, ಡಿಂಗಿರಾತ, ಬಲಗುಪ್ತ, ರಾಜಸೇನ, ಲೋಹಿತಾಕ್ಷ, ವಿಜಯವರ್ಮರಿಗೆ ನನ್ನ ಮಾತನ್ನು ತಿಳುಹಿಸು.

ಶಿಷ್ಯಂ—ಹಾಗೆಯೇ (ಎಂದು ಹೋಗಿ ಬಂದು ದುಃಖದಿಂದ) ಗುರುಗಳೇ ! ತಂತ್ರವೆಲ್ಲವೂ ಪಲ್ಲಟವಾಯಿತು. ಆ ಭದ್ರಭಟ ಪ್ರಮುಖರೂ ಅವರಿಗಿಂತ ಮೊದಲು ಬೆಳಗಿನಜಾವದಲ್ಲಿಯೇ ಹೊರಟು ಹೋಗಿರುವರು.

ಚಾಣ—(ಸ್ವಗತಂ) ಅವರಿಗೆ ಮಾರ್ಗದಲ್ಲಿ ಎಲ್ಲವೂ ಅನುಕೂಲವಾಗಲಿ.

(ಪ್ರಕಾಶಂ) ಮಗೂ! ಚಿಂತಿಸಬೇಡ ನೋಡು.

ವೃ॥ ತೆರಳ್ದರವರ್ ಮೊದಲ್ ಮನಃದೊಳೀನನೊ ಯೋಚಿಸುತಂ
ತೆರಳ್ದವರ್। ತೆರಳದ ರಾರವರ್ಗರಳ ಲೀಗಳು ಮುಜ್ಜುಗ
ಗೊಳ್ಳು ತೊಲ್ಮೆಯಿಂ। ತೆರಳದೆ ನಿಲ್ಗೆ ಸಾಸಿರದಳಂಗಳ
ನರ್ದಿಪ ಬೀರದಿಂದೆ ನಂ।ದರ ನಿರಿದಿಕ್ಕಿತನ್ನದಟುದೋರಿಹ
ಮನ್ಮನ ಮೊಂದುಮಾತ್ರಮೇ ॥

(ಎಂದೆದ್ದು ಆಕಾಶದಲ್ಲಿ ಲಕ್ಷ್ಯವನ್ನಿಟ್ಟು)

ಇದೋ ದುರಾತ್ಮರಾದ ಭದ್ರಭಟ ಪ್ರಮುಖರನ್ನು ಹಿಡಿದು ತರುವೆನು. (ಆತ್ಮಗತಂ) ದುರಾತ್ಮನಾದ ರಾಕ್ಷಸನೇ! ಈಗೆಲ್ಲಿಗೆ ಹೋಗುವೆ? ಇದೋ! ನಾನು ಈಗಲೇ ನಿನ್ನನ್ನು

ಕಂ॥ ಮದಬಲದಿಂ ಮುಸ್ಕುಗ್ಗುವ।
ಸದಮಲದಾನದ ನಿರಂಕುಶದ ಸಾಹ್ಯಮನೊ॥
ಲ್ಲದ ನಿನ್ನಂ ವನಗಜದಂ।
ದದೆ ಮತಿಯಿಂ ಪಿಡಿದು ವೃಷಲಕಾರ್ಯದೊಳಿಡುವೆಂ॥

(ಎಂದೆಲ್ಲರೂ ಹೊರಟುಹೋದರು)

ಪ್ರಥಮಾಂಕಂ ಸಂಪೂರ್ಣಂ



# ದ್ವಿತೀಯಾಂಕಂ.



(ಅನಂತರದಲ್ಲಿ ಹಾವಾಡಿಗನು ಬರುವನು)

ಹಾವಾಡಿಗ—

ಕಂದಂ|| ತಿಳಿವ ತರ್ಗಂತ್ರನುಸಾರ್ ಮಂ |
ಡಳಮಂ ಚಿಂತಿಸುತೆ ಬರೆವರವರಾ ಮರ್ಗಂತ್ರಂ ||
ಗಳ ನೋಣ ನಿಪುಣರಾರವ |
ರಿಳೆಯಾಣ್ಮರ ಸುರಗಪತಿಗಳಂ ಸೇವಿಸುವರ್ ||

(ಆಕಾಶದಲ್ಲಿ ಕಿವಿಗೊಟ್ಟು)

ಅಯ್ಯಾ! ನೀನಾವನೆಂದು ಕೇಳುವೆಯೊ? ನಾನು ಜೀರ್ಣವಿಷನೆಂಬ ಹಾವಾಡಿಗನು. ಅಯ್ಯಾ! ಏನು ಹೇಳುವೆ? ನಾನೂ ಹಾವುಗಳೊಡನೆ ಆಡುವುದಕ್ಕೆ ಬಯಸುವೆನೆಂದೊ? ಆದರೆ ಆರ್ಯನು ಯಾವ ವೃತ್ತಿಯಿಂದ ಜೀವಿಸುತ್ತಿರುವನು? ರಾಜಸೇವಕನೆಂದು ಹೇಳುವೆಯೊ? ಆದರೆ ಆರ್ಯನು ಸರ್ಪದೊಡನೆಯೇ ಆಡುತ್ತಿರುವನಲ್ಲವೆ? ಏಕೆಂದರೆ—

ಕಂ|| ಮಣಿ ಮಂತ್ರೌಷಧ ಕುಶಲಂ |
ಫಣಿಜೀವಿಯುಂ ಮುನ್ನತಾಧಿಕಾರದ ಬಲದಿಂ ||
ಸೆಣಸುವ ನೃಪಸೇವಕನು |
ಲ್ಬಣ ಮದಗಜವೇರಿದಾತನುಂ ಮೂವರಿವರ್ ||

ಅವಶ್ಯಕವಾಗಿ ವಿನಾಶವನ್ನನುಭವಿಸುವರು.

ಇದೇನು? ಈತನು ಕಂಡಕೂಡಲೇ ಮರೆಯಾದನಲ್ಲಾ! (ತಿರುಗಿ ಆಕಾಶದಲ್ಲಿ ಕಿವಿಗೊಟ್ಟು) ಅಯ್ಯಾ! ಈ ಪೆಟ್ಟಿಗೆಯಲ್ಲಿರುವುದೇನೆಂದು ಕೇಳು

ವೆಯೊ? ಆರ್ಯನೇ! ನನ್ನ ಜೀವಿಕಾಸಂಪಾದಕಗಳಾದ ಸರ್ಪಗಳು. ನಾನೂ ನೋಡಬೇಕೆಂದು ಹೇಳುವೆಯೋ? ಆರ್ಯನು ಪ್ರಸನ್ನನಾಗಬೇಕು. ಇದು ಆಟಕ್ಕೆ ಸ್ಥಲವಲ್ಲ. ನಿನಗೆ ಕುತೂಹಲವಿದ್ದರೆ ಬಾ. ಈ ಮನೆ ಯಲ್ಲಿ ತೋರಿಸುವೆನು. ಏನು ಹೇಳುವೆ? "ಇದು ಯಜಮಾನನಾದ ಅಮಾತ್ಯರಾಕ್ಷಸನ ಮನೆಯು. ಇಲ್ಲಿ ನಮ್ಮಂತವರಿಗೆ ಪ್ರವೇಶವಿಲ್ಲ" ಎಂದೊ? ಆದರೆ ಆರ್ಯನು ತೆರಳಬಹುದು. ನನಗಾದರೋ ಜೀವಿಕೆ ಯನುಗ್ರಹದಿಂದ ಇಲ್ಲಿ ಪ್ರವೇಶವುಂಟು. ಇದೇನು? ಇವನೂ ಹೊರಟು ಹೋದನು. (ಆತ್ಮಗತಂ) ಆಹಾ ಆಶ್ಚರ್ಯವು! ಚಾಣಕ್ಯಮತಿಗೃಹೀತ ನಾದ ಚಂದ್ರಗುಪ್ತನನ್ನು ನೋಡುವಾಗ ರಾಕ್ಷಸನ ಪ್ರಯತ್ನವು ನಿಷ್ಫಲ ವೆಂದು ತೋರುವದು. ರಾಕ್ಷಸಮತಿಗೃಹೀತನಾದ ಮಲಯಕೇತುವನ್ನು ನೋಡಿದಾಗ ಚಂದ್ರಗುಪ್ತನು ಅಧಿರಾಜ್ಯದಿಂದ ಚಲಿತನಾದಂತೆ ತೋರು ವನು. ಏಕೆಂದರೆ—

ಕಂ|| ತಿರಮೆಂದರಿವೆಂ ನಹೌರ್ಯನ |
ಸಿರಿಯಂ ಚಾಣಕ್ಯಬುದ್ಧಿರಜ್ಜು ಬಿಗಿದಿರಲ್ ||
ಭರದೊಳಮಾತ್ಯ ನುಪಾಯದ |
ಕರದಿಂ ಮುಡಿವಿರ್ಚಿ ಸೆಳಿವತೆರ ದರಿದಪೆನಾಂ ||

ಹೀಗಿರುವುದರಿಂದ ಬುದ್ಧಿಶಾಲಿಗಳಾದ ಈ ಮಹಾಮಾತ್ಯರ ದ್ವೇಷ ದಲ್ಲಿ ನಂದಕುಲ ರಾಜ್ಯಲಕ್ಷ್ಮಿಯು ಸಂಶಯಗೊಂಡಂತಿರುವಳು.

ಕಂ|| ಕಳಭಂಗಳ್ ಪೊಣರ್ವೆಡೆಯೊಳ್ |
ಬಳಲುವ ಪಿಡಿಯಂತೆ ಪಗೆಗಳಾದೀ ಸಚಿವ ||
ರ್ಕಳ ಬಳಿಯೊಳ್ ಸೋಲ್ಗೆಲವಂ |
ತಿಳಿಯದೆ ಸುಳಿಸುಳಿದು ಬಳಲನಾಂಪ ಳ್ಸಿರಿವೆಣ್ ||

ಆಗಲಿ ನಾನು ಅಮಾತ್ಯ ರಾಕ್ಷಸನನ್ನು ಕಾಣುವೆನು.

(ಎಂದು ನಡೆದು ಬಾಗಿಲಲ್ಲಿ ನಿಂತನು).

(ಅನಂತರದಲ್ಲಿ ರಾಕ್ಷಸನು ಪೀಠಗತನಾಗಿ ಸೇವಕನನ್ನು
ಹಿಂದಿಟ್ಟುಕೊಂಡು ದುಃಖಿಸುತ್ತಾ ಪ್ರವೇಶಿಸುವನು)

ರಾಕ್ಷಸಂ—(ಕಂಬನಿಗರೆದು) ಅಹಾ! ಕಷ್ಟಂ! ಕಷ್ಟಂ!

ವೃ॥ ನಯಶೌರ್ಯಾದಿ ಗುಣಂಗಳಿಂ ಪಗೆಗಳಂ ಗೆಲ್ದಿರ್ದ ನಂದಾ
ನ್ವಯಂ। ಕ್ಷಯಮೆಯ್ದಲ್ ಯದುವಂಶದಂದದಕಟಾ!
ದುರ್ದೈವದಿಂ ದಿಂತು ॥ ಚಿಂತೆಯನೊಂದು ತ್ತಿರುಳುಂ
ಪಗಲ್ ಬಳಲುತುಂ ನೀಳ್ದಿಚ್ಚರಂ ತಾಳ್ದಿದೆ! ನ್ನಯ ಚಿತ್ರಾ
ರ್ಪಣಮಿಂದು ಭಿತ್ತಿಯನಗಲ್ದಿರ್ಕುಂ ಗಡಾ! ಮಾಳ್ಪೆನೇಂ॥

ಅಥವಾ॥ ಪರಲೋಕಂ ಬಡೆದಿರ್ದೊಡಂ ಪ್ರಭು ಸಪತ್ನೋಚ್ಛೇದ
ದಿಂ ತೃಪ್ತಿಗೊಂ। ಡಿರಲೆಂದಲ್ಲದೆ ಭಕ್ತಿಯಂ ತೊರೆದು
ಜೀವಂ ಪೋಪುದೆಂದುಳ್ಳುತೈ। ಸಿರಿಯಂ ಕಾಮಿಸಿ ಲೋಕ
ರೂಢ ವಿಷಯಂಗಳ್ಗಿತ್ತು ಮುಚ್ಚಿತ್ತಮುಂ।ಪೆರನೊಳ್ದಾಸ್ಯ
ಮನೆಯ್ದಿ ಕೌಶಲದೊಳೀ ತಂತ್ರಂಗಳಂ ಮಾಡೆ ನಾಂ ॥

(ಎಂದಾಕಾಶವನ್ನೇ ನೋಡುತ್ತಾ ಕಂಬನಿಯೊಡನೆ)

ಅಯ್ಯೋ! ಭಗವತಿ ಕಮಲವಾಸಿನಿಯೆ! ನೀನು ದಿಟವಾಗಿ ಗುಣ
ವನ್ನರಿತವಳಲ್ಲ. ಏಕೆಂದರೆ:—

ಕಂ॥ ಆನಂದ ಜನಕನಾದೊಡ।
ಮಾನಂದನನುಳಿದರಾತಿಯುಹ ವೃಷಲನೊಳಿಂ॥
ತಾನಂದಿಪೆ? ಗಜನಾಶದೆ।
ದಾನಾಂಬುವೋಲೇತಕಳಿಯುದಲ್ಲಿಯೆ ಚಪಲೆ! ॥

ಮತ್ತಂ ಕುಲಹೀನೆಯೆ !

ವೃ ॥ ಧರಣಿಯೊಳೆಲ್ಲರುಂ ಮಡಿದರೇ ಸುದಿತೋದಿತವಂಶಭೂ
ಮಿಪರ್ । ನೆರೆದೆಯಲಾವರಾಕಿ ! ಕುಲಹೀನನೊಳಾರಿಪು
ವ ಮೌರ್ಯಪುತ್ರನೊಳ್ ॥ ಪರಿಕಿಸಿ ನೋಡೆ ಕಾಶಕುಸು
ಮಾಂಚಲಚಂಚಲ ಮಂಗನಾಮತಿ । ಸ್ಫುರಣಮದಲ್ತೆ!
ಪೂರುಷಗುಣಗ್ರಹಕೌಶಲದೊಳ್ ಪರಾಙ್ಮುಖಂ ॥

ಮತ್ತಂ ಅವಿನೀತೆಯೆ ! ಆದುದರಿಂದ ನಾನು ಆಶ್ರಯನಾಶದಿಂದಲೇ ನಿನ್ನ ಆಸೆಯನ್ನು ನಾಶಗೊಳಿಸುವೆನು.

(ಯೋಚಿಸಿ) ನಾನು ಪ್ರಿಯಮಿತ್ರನಾದ ಚಂದನದಾಸನ ಮನೆಯಲ್ಲಿ ಮನೆಯವರನ್ನಿಟ್ಟು ಪಟ್ಟಣದಿಂದ ಹೊರಟುಬಂದುದು ನ್ಯಾಯ್ಯವಾಯಿತು. ಏಕೆಂದರೆ:—ರಾಕ್ಷಸನು ಕುಸುಮಪುರಜಯದಲ್ಲಿ ಉದಾಸೀನನಾಗಿಲ್ಲವೆಂದರಿತು, ಅಲ್ಲಿದ್ದುಕೊಂಡು ನಮ್ಮೊಡನೆ ಏಕಕಾರ್ಯನಿರ್ವಾಹಕರಾದ ಪ್ರಭುಸೇವಕರ ಪ್ರಯತ್ನವು ಕಡಮೆಯಾಗಲಾರದು. ಚಂದ್ರಗುಪ್ತನ ಶರೀರನಾಶಕ್ಕಾಗಿ ನಾವು ನಿಯಮಿಸಿರುವ ದುಃಖದಾಯಿಗಳನ್ನು ವಶಪಡಿಸಿಕೊಳ್ಳುವುದಕ್ಕೂ, ಶತ್ರುಗಳ ತಂತ್ರಗಳನ್ನು ಭೇದಿಸುವುದಕ್ಕೂ ದೊಡ್ಡ ಬೊಕ್ಕಸದೊಡನೆ ಶಕಟದಾಸನನ್ನಿಟ್ಟಿರುವೆನು. ಅಲ್ಲದೆ ಪ್ರತಿಕ್ಷಣದಲ್ಲಿಯೂ ಶತ್ರುಗಳ ವೃತ್ತಾಂತವನ್ನು ತಿಳುಹುವುದಕ್ಕೂ, ಅವರ ಕೂಟವನ್ನು ಭೇದಿಸುವುದಕ್ಕೂ ಮಿತ್ರರಾದ ಜೀವಸಿದ್ಧಿಪ್ರಮುಖರನ್ನು ನಿಯಮಿಸಿರುವೆನು. ಆದುದರಿಂದ ಈ ವಿಷಯದಲ್ಲಿ ಬಹಳಮಾತೇಕೆ ?

ಕಂ ॥ ದೇವಂ ಪ್ರಿಯಸುತ ನಾವನ ।
ನೋವ್ರತೆ ಪುಲಿವರಿಯತೆರದೆ ಕುಲದೊಡನಳಿದಂ ॥
ದೈವಮಗೋಚರ ಮವಸಂ ।
ಭಾವಿಸದಿರೆ ಬುದ್ಧಿ ಬಾಣದಿಂ ಬಿರಿದಪೆನಾಂ ॥

( ಅನಂತರದಲ್ಲಿ ಕಂಚುಕಿ ಪ್ರವೇಶಿಸುವನು )

ಕಂಚುಕಿ — (ಸ್ವಗತಂ)

ವೃ॥ ಜರೆಯಿದು ನಂದರಂ ತರಿದು ಮೌರ್ಯಗೆ ರಾಜ್ಯಮನಿತ್ತ
ವಿಷ್ಣುಗು। ಪ್ತ ರಚಿತ ನೀತಿವೋಲ್ಬಿಡದೆ ಕಾಮಮಡಂಗಿಸು
ತೆನ್ನೊಳಿಂತೊ ಸು। ಸ್ಥಿರತರಧರ್ಮಮಂ ಪೂರೆಯೆ ಲೋಭ
ವಿದಂತರಮಾಂತು ಸೇವೆಯಿಂ। ದರರೆ! ಅಮಾತ್ಯನಂತೆ
ಗೆಲಲುಜ್ಜುಗಿಕುಂ ಗೆಲಲಾರದೆಂದಿಗುಂ॥

( ಎಂದು ನಡೆದು ಬಳಿಪಿಡಿದು )

ಇದೊ! ಅಮಾತ್ಯರಾಕ್ಷಸನ ಮನೆಯು. ಒಳಪೊಗುವೆನು, (ಎಂದೊಳಪೊಕ್ಕಂತೆ ನಟಿಸಿ) ನಿನಗೆ ಮಂಗಳವಾಗಲಿ

ರಾ—ಆರ್ಯನೆ! ವಂದಿಸುವೆನು. ಪ್ರಿಯಂವದಕನೇ! ಪೀಠವನ್ನು ತೆಗೆದು ಕೊಂಡು ಬಾ.

ಪ್ರಿ—ಇದೋ ಪೀಠವು, ಆರ್ಯನು ಕುಳಿತುಕೊಳ್ಳಬೇಕು.

ಕಂ—(ಕುಳಿತುಕೊಂಡು) “ಆರ್ಯನು ಬಹುಕಾಲವಾಗಿ ಉಚಿತಾಲಂಕಾರ ವನ್ನು ಬಿಟ್ಟಿರುವುದರಿಂದ ನನ್ನ ಹೃದಯವು ವ್ಯಥೆಪಡುತ್ತಿರುವುದು ಸ್ವಾಮಿ ಗುಣಗಳನ್ನು ಶೀಘ್ರವಾಗಿ ಮರೆಯುವುದಕ್ಕೇನೋ ಆಗುವು ದಿಲ್ಲ. ಆದರೂ ಆರ್ಯನು ನನ್ನ ವಿಜ್ಞಾಪನೆಯನ್ನು ಗೌರವಿಸಬೇಕು” ಎಂದು ಕುಮಾರನಾದ ಮಲಯಕೇತುವು ಅಮಾತ್ಯನನ್ನು ಬೇಡಿಕೊಳ್ಳು ವನು. (ಎಂದು ಒಡವೆಗಳನ್ನು ತೋರಿಸಿ) ಕುಮಾರನು ಈ ಒಡವೆಗಳನ್ನು ತನ್ನ ಶರೀರದಿಂದಲೇ ತೆಗೆದು ಕಳುಹಿಸಿರುವುದರಿಂದ ಆರ್ಯನು ಇವು ಗಳನ್ನು ಧರಿಸಬೇಕು.

ರಾ—ಆರ್ಯ ಜಾಜಲಿಯೆ! ನಮ್ಮ ಮಾತನ್ನು ಕುಮಾರನಿಗೆ ಬಿನ್ನವಿಸು. ನಿನ್ನ ಗುಣಪಕ್ಷಪಾತದಿಂದ ಸ್ವಾಮಿಗುಣಗಳನ್ನು ಮರೆತೇ ಇರುವೆವು

ಆದರೂ:—

ವೃ॥ ಪರರಪಮಾನದಿಂದೆ ಬಲಗುಂದುತೆ ಪಂದೆಯೆನಿಪ್ಪೊಡಲ್ಗೆ ಭಾ। ಸುರತರ ಭೂಷಣಾವಳಿಯು ನನ್ನವರಂ ಧರಿಸೆಂ ಮಹೀಂದ್ರಕೇ॥ ಖರ! ರಿಪುಚಕ್ರಮಂತರಿದು ಕಂಟಕಮಿಲ್ಲದೆ ನಿನ್ನ ಹೇಮಸುಂ।ದರಹರಿಪೀಠಮಂ ನೃಪ! ಸುಗಾಂಗದೊಳೆನ್ನವರಂ ಸಮರ್ಪಿಸೆಂ ॥

ಕಂ—ಅಮಾತ್ಯನು ನೇತೃವಾಗಿರುವಲ್ಲಿ ಕುಮಾರನಿಗಿದು ದುರ್ಲಭವಲ್ಲ. ಆದುದರಿಂದ ಕುಮಾರನ ಪ್ರಥಮ ಪ್ರಣಯವನ್ನು ಗೌರವಿಸಬೇಕು.

ರಾ—ಆರ್ಯನೆ! ಕುಮಾರನ ನುಡಿಯಂತೆ ನಿನ್ನ ನುಡಿಯೂ ಅತಿಕ್ರಮಿಸ ತಕ್ಕುದಲ್ಲ. ಆದುದರಿಂದ ಕುಮಾರನಾಜ್ಞೆಯನ್ನು ನಡೆಯಿಸುವೆನು.

ಕಂ—(ಒಡವೆಗಳನ್ನು ತೊಡಿಸಿದಂತೆ ನಟಿಸಿ) ನಿನಗೆ ಮಂಗಳವಾಗಲಿ. ನಾನು ಹೊರಡುವೆನು.

ರಾ—ಆರ್ಯನೆ! ವಂದಿಸುವೆನು.

ಕಂ—(ಹೊರಟುಹೋದನು).

ರಾ—ಪ್ರಿಯಂವದಕನೇ! ನನ್ನನ್ನು ನೋಡಬೇಕೆಂದು ಬಾಗಿಲಲ್ಲಿ ಯಾರಾದರೂ ಇರುವರೊ? ತಿಳಿದುಕೊಂಡುಬಾ.

ಪ್ರಿ—ಅಮಾತ್ಯನಾಜ್ಞೆಯಂತಾಗಲಿ. (ಎಂದು ನಡೆದು ಹಾವಾಡಿಗನನ್ನು ನೋಡಿ) ಆರ್ಯನೆ! ನೀನಾರು?

ಹಾವಾಡಿಗ—ಅಯ್ಯಾ! ನಾನು ಜೀರ್ಣವಿಷನೆಂಬ ಹಾವಾಡಿಗನು. ಅಮಾತ್ಯನೆದುರಾಗಿ ಹಾವುಗಳನ್ನಾಡಿಸಬೇಕೆಂದಪೇಕ್ಷಿಸುವೆನು.

ಪ್ರಿ—ಆದರೆ-ನಿಲ್ಲು; ಅಮಾತ್ಯನಿಗೆ ತಿಳುಹುವೆನು.

(ಎಂದಮಾತ್ಯರಾಕ್ಷಸನ ಬಳಿಗೆ ಹೋಗಿ)

ಅಮಾತ್ಯನೇ! ಅವನು ಹಾವಾಡಿಗನಂತೆ. ಹಾವುಗಳನ್ನು ತೋರಿಸ
ಬೇಕೆಂದಪೇಕ್ಷಿಸುವನು.

ರಾ—(ಎಡಗಣ್ಣು ನಡುಗಿದಂತೆ ನಟಿಸಿ) (ಸ್ವಗತಂ)
ಇದೇನು? ಮೊದಲೇ ಸರ್ಪದರ್ಶನವು. (ಪ್ರಕಾಶಂ) ಪ್ರಿಯಂವದಕನೇ!
ನಮಗೆ ಸರ್ಪದರ್ಶನದಲ್ಲಿ ಕುತೂಹಲವಿಲ್ಲ. ಆದುದರಿಂದ ಅವನನ್ನು
ಬಹುಮಾನದೊಡನೆ ಕಳುಹಿಸು.

ಪ್ರಿ—ಹಾಗೆಯೇ ಆಗಲಿ (ಎಂದವನ ಬಳಿಗೆ ಹೋಗಿ) ಆರ್ಯನೆ! ಅಮಾತ್ಯನು
ಸರ್ಪದರ್ಶನಫಲದಿಂದ ನಿನ್ನನ್ನು ಅನುಗ್ರಹಿಸುವನೇ ಹೊರತು ಸರ್ಪ
ದರ್ಶನದಿಂದಲ್ಲ.

ಹಾ—ಭದ್ರಮುಖನೇ! ಅಮಾತ್ಯನಿಗೆ ಬಿನ್ನವಿಸು, ನಾನು ಹಾವಾಡಿಗನು
ಮಾತ್ರವೇ ಅಲ್ಲ. ಕವಿಯೂ ಆಹುದು. ಅಮಾತ್ಯನು ನನ್ನನ್ನು ದರ್ಶನ
ದಿಂದ ಅನುಗ್ರಹಿಸದಿದ್ದರೆ ಈ ಪತ್ರಿಕೆಯನ್ನು ಓದಿಕೊಳ್ಳಬೇಕೆಂದು
ಅಮಾತ್ಯನಿಗೆ ಬಿನ್ನವಿಸು.

ಸೇವಕ—(ಪತ್ರವನ್ನು ತೆಗೆದುಕೊಂಡು ರಾಕ್ಷಸನ ಬಳಿಗೆ ಹೋಗಿ)
ಅಮಾತ್ಯನೆ! "ನಾನು ಹಾವಾಡಿಗನು ಮಾತ್ರವೇ ಅಲ್ಲ, ಕವಿಯೂ
ಅಹುದು. ಆದುದರಿಂದ ಅಮಾತ್ಯನು ನನ್ನನ್ನು ದರ್ಶನದಿಂದ ಅನುಗ್ರಹಿಸ
ದಿದ್ದರೆ ಈ ಪತ್ರವನ್ನಾದರೂ ಓದಿಕೊಳ್ಳಬೇಕು" ಎಂದು ಈ ಹಾವಾ
ಡಿಗನು ಬೇಡುತ್ತಿರುವನು.

ರಾಕ್ಷ—(ಪತ್ರವನ್ನು ತೆಗೆದುಕೊಂಡು ಓದುವನು).

ಕಂ|| ಆರಡಿ ತನ್ನಯ ಜಾಣ್ಮೆಯೊ |
ತೋರಂದದಿ ನಾನಕುಸುಮರಸಮುಮನೆಲ್ಲಂ ||
ಪೀರು ತ್ತುಗುಳ್ದಪು ದದರಿಂ |
ಧಾರಿಣಿಯುಲ್ಲೆನಿತೊ ಪರರ ಕಜ್ಜಗಳಕ್ಕುಂ ||

(ಯೋಚಿಸಿ ತನ್ನಲ್ಲಿ ತಾನು) ಓಹೋ! ಕುಸುಮಪುರ ವೃತ್ತಾಂತವನ್ನು ತಿಳಿದ ನಿನ್ನ ಗೂಢಚಾರನೆಂದು ಈ ಪದ್ಯದ ಅರ್ಥವು. ಕಾರ್ಯವ್ಯಗ್ರತೆಯಿಂದಲೂ ಗೂಢಚಾರರ ಬಾಹುಳ್ಯದಿಂದಲೂ ಮರೆತಿದ್ದೆನು. ಈಗ ಜ್ಞಾಪಕ ಬಂದಿತು, ನಿಜ. ಇವನು ಹಾವಾಡಿಗನ ವೇಷವನ್ನು ಧರಿಸಿದ ವಿರಾಧಗುಪ್ತನಾಗಿರಬಹುದು. (ಪ್ರಕಾಶಂ) ಪ್ರಿಯಂವದಕನೆ! ಇವನನ್ನು ಒಳಕ್ಕೆ ಬಿಡು. ಇವನು ಒಳ್ಳೆಯ ಕವಿಯು. ಇವನಿಂದ ಸುಭಾಷಿತವನ್ನು ಕೇಳಬೇಕು.

ಸೇವ—ಹಾಗೆ ಆಗಲಿ-(ಎಂದು ಹಾವಾಡಿಗನ ಬಳಿಗೆ ಹೋಗಿ) ಆರ್ಯನು ಒಳಕ್ಕೆ ಬರಬಹುದು.

ಹಾವಾಡಿ—(ಒಳಗೆ ಬಂದು ನೋಡಿದಂತೆ ನಟಿಸಿ) (ಸ್ವಗತಂ)

ಇದೊ! ಅಮಾತ್ಯರಾಕ್ಷಸನು. ಇವನಾದರೆ—

ವೃ|| ಜಗುಳ್ವೆಡದೋಳನಿಟ್ಟು ಕೊರಲೊಳ್ ಮೊಗಮಂ ತಿರುಪುತ್ತೆ ಬಳ್ಮೆಯಿಂ| ಪೆಗಲೊಳಗಿಟ್ಟೊಡಂ ಜಗುಳಲಾ ಬಲದೋಳೊತ್ತೊಡೆಯುಲ್ಲದಾವನು || ಜ್ಜುಗಕಗಿ ದೀಗಳುಂ ಕುಚಮುಖಂ ಪರಿರಂಭದೆ ಬಾಡುವಂತೆ ತಾಂ | ಸೊಗಯಿಪ ದಕ್ಷಿಣಸ್ತನಮು ನಾನಿಸ ಳೀಸಿರಿ ಮೌರ್ಯವಕ್ಷದೊಳ್ ||

(ಪ್ರಕಾಶಂ) ಅಮಾತ್ಯನಿಗೆ ಜಯವಾಗಲಿ

ರಾಕ್ಷ--(ನೋಡಿ) ವಿರಾಧ (ಎಂದರ್ಧೋಕ್ತಿಯಲ್ಲಿ) ಇದೇನು ವಿಕೃತವೇಷ? ಇದೇನು ಗಡ್ಡಮೀಸೆಗಳು? ಪ್ರಿಯಂವದಕನೆ! ಈಗ ಹಾವುಗಳನ್ನಾಡಿಸಬೇಕು. ಇನ್ನು ಪರಿಜನರು ವಿಶ್ರಾಂತಿಗೊಳ್ಳಲಿ. ನೀನೂ ನಿನ್ನ ಕೆಲಸದಲ್ಲಿರು.

ಸೇವ—ಹಾಗೇ ಆಗಲಿ-(ಎಂದು ಪರಿಜನರೊಡನೆ ಹೊರಟು ಹೋದನು).

ರಾಕ್ಷ—ಮಿತ್ರ ವಿರಾಧಗುಪ್ತನೆ! ಈ ಪೀಠದಲ್ಲಿ ಕುಳಿತುಕೊ.

ವಿರಾ—(ಕುಳಿತುಕೊಂಡಂತೆ ನಟಿಸುವನು)

ರಾಕ್ಷ—ಅಯ್ಯಾ! ಸ್ವಾಮಿಪಾದಕಮಲವನ್ನು ನಂಬಿದವರ ಗತಿಯು ಹೀಗಾಯಿತು. (ಎಂದಳುವನು)

ವಿರಾಧ—ಅಮಾತ್ಯನೇ! ಚಿಂತಿಸಬೇಡ. ಅಮಾತ್ಯನು ಶೀಘ್ರವಾಗಿಯೇ ನಮ್ಮನ್ನು ಪೂರ್ವಸ್ಥಿತಿಗೆ ತರುವನು.

ರಾಕ್ಷ—ಮಿತ್ರನೆ! ಕುಸುಮಪುರ ವೃತ್ತಾಂತವನ್ನು ವರ್ಣಿಸು

ವಿರಾಧ—ಅಮಾತ್ಯನೆ! ಕುಸುಮಪುರವೃತ್ತಾಂತವು ಬಹಳವಿರುವುದು. ಆದುದರಿಂದ ಎಲ್ಲಿಂದ ಮೊದಲುಮಾಡಿ ಹೇಳಲಿ?

ರಾಕ್ಷ—ಮಿತ್ರನೆ! ಚಂದ್ರಗುಪ್ತನು ನಗರಮಂ ಪ್ರವೇಶಿಸಿದುದು ಮೊದಲುಗೊಂಡು ನಮ್ಮಿಂದ ನಿಯುಕ್ತರಾದ ದುಃಖದಾಯಿಗಳು ಏನೇನು ಮಾಡಿದರೆಂಬುದನ್ನು ಮೊದಲಿಂದಲೂ ಕೇಳಲಪೇಕ್ಷಿಸುವೆನು.

ವಿರಾಧ—ಇದೋ! ಹೇಳುವೆನು. ಉಲ್ಲೋಲಕಲ್ಲೋಲ ಪ್ರಳಯ ಪಾರಾವಾರಗಳಂತಿರುವ, ಚಾಣಕ್ಯನ ಬುದ್ಧಿಶಕ್ತಿಗೊಳಗಾದ ಶಕ, ಯವನ, ಕಿರಾತ, ಕಾಂಭೋಜ, ಬಾಹ್ಲೀಕ, ಪಾರಸೀಕ ಪ್ರಮುಖರಾದ ಚಂದ್ರಗುಪ್ತ ಪರ್ವತೇಶ್ವರರ ಸೇನೆಗಳು ಕುಸುಮಪುರವನ್ನು ಸುತ್ತಲೂ ಮುತ್ತಿದುವು.

ರಾಕ್ಷ—(ಸಂಭ್ರಮದಿಂದ ಶಸ್ತ್ರವನ್ನು ಸೆಳೆದು) ಎಲ! ಎಲಾ! ನಾನಿರುವಾಗ ಕುಸುಮಪುರವನ್ನು ಮುತ್ತುವವನು ಯಾವನು? ಪ್ರವೀರಕನೆ! ಪ್ರವೀರಕನೆ! ಈಗಲೇ ಬೇಗ—

ವೃ|| ತಳುವದೆ ಬಿಲ್ಲನಾಂತು ಭಟರೆಲ್ಲೆಡೆಯೊಳ್ ಬಳಸಿರ್ಕೆ
ಕೋಂಟೆಯುಂ| ಗಳಿಲನೆ ನಿಲ್ಗೆ ಬಾಗಿಲೊಳಿಭದ್ವಿಪ ಭಂಜನ

ಕುಂಜರಾಳಿಗಳ್ ॥ ಎಳಸುವರಾರ್ಜಸಂಬಡೆಯುಲಾ ಭಟ
ರೆನ್ನೊಡನೇಕಚಿತ್ತದಿಂ । ದುಳಿ ದಪಮೃತ್ಯುಭೀತಿಯ
ನರಾತಿಗಳಂ ಜಯಿಸಲ್ ತೆರಳ್ದಿ ತಾಂ ॥

ವಿರಾಧ—ಅಮಾತ್ಯನೆ! ಗಾಬರಿಗೊಳ್ಳಬೇಡ. ಕಳೆದುಹೋದುದನ್ನು ಈಗ ಹೇಳುತ್ತಿರುವೆನು.

ರಾಕ್ಷ—(ನಿಟ್ಟುಸುರುಬಿಟ್ಟು) ಕಷ್ಟಂ! ಇದು ಕಳೆದುಹೋದುದೆ? ನಾನಾದರೆ ಇದನ್ನು ಅದೇ ಕಾಲವೆಂದು ತಿಳಿದೆನು. (ಶಸ್ತ್ರವನ್ನು ಬಿಸುಟು) ಹಾ ಸ್ವಾಮಿಯೆ! ನಂದನೆ! ರಾಕ್ಷಸನಲ್ಲಿ ನಿನಗಿದ್ದ ಅನುಗ್ರಹಾತಿಶಯವನ್ನು ಸ್ಮರಿಸುವೆನು. ನೀನು ಈ ಯುದ್ಧಕಾಲದಲ್ಲಿ—

ವೃ॥ ತಳರ್ದಪುದೆತ್ತ ಕಾರ್ಮುಗಿಲ ಪೋಲ್ವ ಗಜಾವಳಿಯತ್ತ
ರಾಕ್ಷಸಂ । ತಳರ್ವುದು ರಾಕ್ಷಸಂ ಚಲಜಲಪ್ಲುತಿಯಾಂತ
ತುರಂಗಯೂಥಮುಂ ॥ ಕಳಿವುದು ರಾಕ್ಷಸಂ ತರಿವುದೆಲ್ಲ
ದಳಂಗಳನೆಂದು ನತ್ಮೈಯುಂ! ಬೆಳೆಯಿಸಿ ಪೇಳ್ದೆಯಲ್ತೆ ಪುರ
ದಲ್ಲಿಯೆ ರಾಕ್ಷಸಕೋಟಿಯಿರ್ದವೋಲ್ ॥

ವಿರಾಧ—

ಆಬಳಿಕ ಸುತ್ತಲೂ ಮುತ್ತಲ್ಪಟ್ಟಿರುವ ಕುಸುಮಪುರವನ್ನು ಕಂಡು ಬಹಳ ದಿನಗಳ ಮುತ್ತಿಗೆಯಿಂದುಂಟಾದ ಪ್ರಜೆಗಳ ಸಂಕಟವನ್ನು ಸೈರಿಸಲಾರದೇ, ಅಂತಹ ಅವಸ್ಥೆಯಲ್ಲಿಯೂ ಸ್ವಾಮಿಯಾದ ಸರ್ವಾರ್ಥಸಿದ್ಧಿ ರಾಜನು ಪುರಜನಾಪೇಕ್ಷೆಯಿಂದ ಸುರಂಗದ ದಾರಿಯನ್ನನುಸರಿಸಿ ತಪೋವನಕ್ಕೆ ತೆರಳಲು, ನಾಯಕನಿಲ್ಲದುದರಿಂದ ನಿಮ್ಮ ಸೈನಿಕರು ಪ್ರಯತ್ನಗಳನ್ನು ನಿಲ್ಲಿಸಲು, ಅಂತರ್ನಗರವಾಸಿಗಳಾದ ನಿಮ್ಮ ಭಟರು ಜಯಘೋಷಣ ವ್ಯಾಘಾತಾದಿ ಸಾಹಸಗಳಿಂದ ಶತ್ರುಗಳ ಭೇದಕ್ಕೊಳಗಾದರೆಂದೂಹಿಸಲ್ಪಡಲು, ನಂದರಾಜ್ಯವನ್ನು ಉದ್ಧರಿಸುವುದಕ್ಕಾಗಿ ನೀವೂ ಸುರಂಗದ ದಾರಿಯಿಂದ

ಹೊರಟುಬರಲು, ಚಂದ್ರಗುಪ್ತನನ್ನು ಕೊಲ್ಲುವುದಕ್ಕಾಗಿ ನೀವು ಕಳುಹಿದ್ದ ವಿಷಕನ್ಯೆಯಿಂದ ಪರ್ವತೇಶ್ವರನು ಮಡಿಯಲು-

ರಾಕ್ಷ—ಮಿತ್ರನೆ! ಆಶ್ಚರ್ಯವನ್ನು ಕಂಡೆಯ?

ವೃ॥ ಛಲುಗುಣನಂ ಕೊಲಲ್ ರವಿಸುತಂ ಸುರಶಕ್ತಿಯನೋವಿ
ದಂತೆ ನಾಂ । ಸಲುಹಿದೆ ನರ್ದಿಸಲ್ ವೃಷಲನಂ ವಿಷಕನ್ನೆ
ಯ ನೇಕಹಂತ್ರಿಯಂ ॥ ಒಲಿದದು ಕೃಷ್ಣನೊಳ್ಪಿಗೆ
ಘಟೋತ್ಕಚನಂ ತರಿದಂತವಂಗಿವಳ್ । ಕೊಲಲನುವಾದ
ಪರ್ವತನ ನಿಕ್ಕಿದ ಳೀಳ್ಗೆಗೆ ವಿಷ್ಣುಗುಪ್ತನ ॥

ವಿರಾಧ—ಅಮಾತ್ಯನೆ! ಇದು ದೈವವಿಲಾಸವು. ಮಾಡತಕ್ಕದೇನು?

ರಾಕ್ಷ—ಆಮೇಲಾಮೇಲೆ.

ವಿರಾಧ—ಬಳಿಕ ತಂದೆಯನ್ನು ಕೊಲ್ಲಿಸಿದ ಭಯದಿಂದ ಕುಮಾರನಾದ ಮಲಯಕೇತುವು ಓಡಿಹೋಗಲು, ಆ ಚಾಣಕ್ಯಹತಕನು ಅರ್ಧರಾಜ್ಯವನ್ನು ಕೊಡಿಸುವೆನೆಂದು ಪರ್ವತೇಶ್ವರನ ಸಹೋದರನಾದ ವೈರೋಚಕನನ್ನು ನಂಬಿಸಿ, ಚಂದ್ರಗುಪ್ತನು ನಂದಭವನವನ್ನು ಪ್ರವೇಶಿಸುವನೆಂದು ಡಂಗುರವನ್ನು ಹೊಯ್ಸಿ, ಕುಸುಮಪುರದಲ್ಲಿರುವ ಚಿತ್ರಗಾರರೆಲ್ಲರನ್ನೂ ಕರೆಯಿಸಿ, "ಜೋಯಿಸರ ಅಪ್ಪಣೆಯಿಂದ ಚಂದ್ರಗುಪ್ತನು ಸರುಹೊತ್ತಿನಲ್ಲಿ ನಂದರ ಅರಮನೆಯನ್ನು ಪ್ರವೇಶಿಸುವನಾದುದರಿಂದ ಮೂಡಣ ಬಾಗಿಲು ಮೊದಲುಗೊಂಡು ಅರಮನೆಯೆಲ್ಲವನ್ನೂ ಅಲಂಕರಿಸಬೇಕು" ಎಂದು ಹೇಳಿದನು.

ಆಬಳಿಕ ಚಿತ್ರಗಾರರು "ಆರ್ಯನೆ! ಸ್ವಾಮಿಯಾದ ಚಂದ್ರಗುಪ್ತನು ನಂದಮಂದಿರವಂ ಪ್ರವೇಶಿಸುವನೆಂದು ಮೊದಲೇ ತಿಳಿದು ದಾರುವರ್ಮನೆಂಬ ಚಿತ್ರಗಾರನು, ಕನಕತೋರಣನ್ಯಾಸಾದಿಪ್ರಸಾಧನವಿಶೇಷದಿಂದ ಅರಮನೆಯು

ಮುಂಬಾಗಿಲನ್ನು ಅಲಂಕರಿಸಿರುವನು. ಈಗ ನಾವು ಮಧ್ಯಭಾಗದಲ್ಲಿ ಅಲಂಕಾರವನ್ನು ಮಾಡಬೇಕಾಗಿರುವುದು" ಎಂದು ಹೇಳಿದರು.

ತರುವಾಯ ಆ ಚಾಣಕ್ಯವಟುವು "ದಾರುವರ್ಮನು ಹೇಳಿಸಿ ಕೊಳ್ಳದೆಯೇ ಅರಮನೆಯನ್ನು ಸಿಂಗರಿಸಿದನು" ಎಂದು ಸಂತಸಗೊಂಡವ ನಂತೆ ಬಹಳಹೊತ್ತು ಅವನ ಸಾಮರ್ಥ್ಯವನ್ನು ಕೊಂಡಾಡಿ "ದಾರುವರ್ಮನೇ! ಈ ಸಾಮರ್ಥ್ಯಕ್ಕನುಗುಣವಾದ ಫಲವನ್ನು ಶೀಘ್ರವಾಗಿಯೇ ಪಡೆಯುವೆ" ಎಂದು ಹೇಳಿದನು.

ರಾಕ್ಷ—(ಖಿನ್ನನಾಗಿ) ಮಿತ್ರನೆ! ಚಾಣಕ್ಯವಟುವಿಗೆ ಸಂತಸವೆತ್ತಣದು? ದಾರುವರ್ಮನ ಪ್ರಯತ್ನವು ವಿಫಲವೋ ದುಷ್ಫಲವೋ ತಿಳಿಯದು. ಇವನು ಮೋಸಹೋದುದರಿಂದಲೋ ನಿರತಿಶಯವಾದ ರಾಜಭಕ್ತಿಯಿಂದ ಲೋ ನಿಯೋಗ ಕಾಲವನ್ನು ನಿರೀಕ್ಷಿಸದೆಯೇ ಚಾಣಕ್ಯನ ಮನಸ್ಸಿನಲ್ಲಿ ಬಲವಾದ ಸಂಶಯವನ್ನುಂಟುಮಾಡಿದನು. ಆಮೇಲಾಮೇಲೆ.

ವಿರಾ—ಆನಂತರದಲ್ಲಿ ಆ ಚಾಣಕ್ಯಹತಕನು "ಅನುಕೂಲವಾದ ಲಗ್ನವು ದೊರೆತುದರಿಂದ ಚಂದ್ರಗುಪ್ತನು ಅರ್ಧರಾತ್ರದಲ್ಲಿ ನಂದಸದನವನ್ನು ಪ್ರವೇಶಿಸುವನು" ಎಂದು ಪುರಜನರಿಗೂ ಚಿತ್ರಗಾರರಿಗೂ ತಿಳುಹಿಸಿ, ಆ ಕ್ಷಣದಲ್ಲಿಯೇ ಪರ್ವತೇಂದ್ರನ ಸಹೋದರನಾದ ವೈರೋಚಕನನ್ನು ಚಂದ್ರಗುಪ್ತನೊಡನೆ ಒಂದೇ ಪೀಠದಲ್ಲಿ ಕುಳ್ಳಿರಿಸಿ ರಾಜ್ಯವಿಭಾಗವನ್ನು ಮಾಡಿದನು.

ರಾಕ್ಷ—ಏನು? ಮೊದಲು ಪ್ರತಿಜ್ಞೆ ಮಾಡಿದಂತೆ ಪರ್ವತಾನುಜನಾದ ವೈರೋಚಕನಿಗೆ ಅರ್ಧರಾಜ್ಯವನ್ನು ಕೊಟ್ಟನೆ?

ವಿರಾಧ— ಅಹುದು.

ರಾಕ್ಷ—(ಸ್ವಗತಂ) ಸಿಜ. ಧೂರ್ತನಾದ ಈ ಚಾಣಕ್ಯಹತಕನು ದೀನನಾದ ಅವನನ್ನೂ ಏನೋ ಒಂದುಪಾಯದಿಂದ ಗುಟ್ಟಾಗಿ ಕೊಂದು ಪರ್ವತೇಶ್ವರ

ವಿನಾಶದಿಂದುಂಟಾದ ಅಪಕೀರ್ತಿಯನ್ನು ಕಳೆದುಕೊಳ್ಳುವುದಕ್ಕಾಗಿ ಈ ಲೋಕವಾರ್ತೆಯನ್ನು ಹುಟ್ಟಿಸಿರುವನು. (ಪ್ರಕಾಶಂ) ಆಮೇಲಾಮೇಲೆ.

ವಿರಾಧ—ಆಬಳಿಕ "ನಿಶೀಥಸಮಯದಲ್ಲಿ ಚಂದ್ರಗುಪ್ತನು ನಂದಾಗಾರವನ್ನು ಪ್ರವೇಶಿಸುವನೆಂದು" ಮೊದಲೇ ಪ್ರಸಿದ್ಧಿಗೊಳಿಸಿದ್ದುದರಿಂದ ಪಟ್ಟಾಭಿಷಿಕ್ತನಾದ ವೈರೋಚಕನು ಹೊಸ ಮುತ್ತಿನ ಚಿತ್ರದಕೆಲಸಗಳಿಂದ ವಿಚಿತ್ರವಾದ ಕವಚವನ್ನು ತೊಟ್ಟು, ಅಂದವಾಗಿರುವಂತೆ ಮಣಿಖಚಿತವಾದ ಕಿರೀಟವನ್ನು ಬಿಗಿಯಾಗಿ ತಲೆಯಲ್ಲಿಟ್ಟು, ಸುಗಂಧಬಂಧುರವಾದ ಕುಸುಮಮಾಲೆಯನ್ನು ವಿಶಾಲವಾಗೆದೆಯಲ್ಲಿ ಉಪವೀತದಂತೆ ಧರಿಸಿ, ಅತ್ಯಂತ ಪರಿಚಿತರಿಗೂ ಆಕಾರವ್ಯಕ್ತಿಯುಂಟಾಗದಂತೆ, ಚಾಣಕ್ಯಹತಕನಾಜ್ಞೆಯಿಂದ ಚಂದ್ರಗುಪ್ತನು ಕುಳಿತುಕೊಳ್ಳುವ ಚಂದ್ರಲೇಖೆಯೆಂಬ ಹೆಣ್ಣಾನೆಯನ್ನೇರಿ, ಚಂದ್ರಗುಪ್ತನನ್ನು ಹಿಂಬಾಲಿಸುವ ರಾಜಲೋಕದಿಂದ ಪರಿವೃತನಾಗಿ ನಂದಮಂದಿರಕ್ಕೆ ತೆರಳುತ್ತಿರಲು, ನಿಮ್ಮಿಂದ ನಿಯುಕ್ತನಾದ ದಾರುವರ್ಮನೆಂಬ ಸೂತ್ರಧಾರನು "ಇವನೇ ಚಂದ್ರಗುಪ್ತ" ನೆಂದು ತಿಳಿದು, ಅವನಮೇಲೆ ಕೆಡಹುವುದಕ್ಕಾಗಿ ಯಂತ್ರತೋರಣವನ್ನು ಸಿದ್ಧಪಡಿಸಿಕೊಂಡನು. ಇಷ್ಟರಲ್ಲಿ ಚಂದ್ರಗುಪ್ತಾನುಯಾಯಿಗಳಾದ ರಾಜರು ತಂತಮ್ಮ ಆನೆಗಳನ್ನು ತಡೆದು ಹೊರಗಡೆಯಲ್ಲಿಯೇ ನಿಲ್ಲಲು, ನಿಮ್ಮಿಂದಲೇ ನಿಯುಕ್ತನು, ಚಂದ್ರಗುಪ್ತನ ಮಾವಟಿಗನೂ ಆದ ಬರ್ಬರಕನು ಕನಕದಂಡದಲ್ಲಿ ಹುದುಗಿಸಿರುವ ಕತ್ತಿಯನ್ನು ಸೆಳೆಯಲೆಳಸಿ ಚಿನ್ನದ ಸರಪಳಿಯುಳ್ಳ ಕನಕದಂಡವನ್ನು ಕೈಯಲ್ಲಿ ಹಿಡಿದುಕೊಂಡನು.

ರಾಕ್ಷ—ಇಬ್ಬರ ಪ್ರಯತ್ನಗಳಿಗೂ ಸಮಯವಲ್ಲ.

ವಿರಾಧ—ಆಮೇಲಾಹೆಣ್ಣಾನೆಯು ಜಘನಾಭಿಘಾತವನ್ನು ಊಹಿಸಿ, ಅತಿವೇಗದಿಂದ ಗತ್ಯಂತರವನ್ನು ಹೊಂದಿತು ಮೊದಲಿನ ವೇಗವನ್ನನು

ಸರಿಸಿ ಕಳಚಿ ಕೆಡಹಿದ ಯಂತ್ರತೋರಣವು ಗುರಿತಪ್ಪಿ ಬೀಳಲು, ದೀನನಾದ ಬರ್ಬರಕನು ಚಂದ್ರಗುಪ್ತನೆಂಬಾಸೆಯಿಂದ ರಭಸವಾಗಿ ಖಡ್ಗವನ್ನು ಸೆಳೆದು ಕೈಯಲ್ಲಿ ಹಿಡಿದು ವೈರೋಚಕನನ್ನು ಕೊಲ್ಲದೆಯೇ ಹತನಾದನು. ಬಳಿಕ ದಾರುವರ್ಮನು ಯಂತ್ರತೋರಣವನ್ನು ಕೆಡಹಿದುದರಿಂದ ತನ್ನನ್ನೂ ಕೊಲ್ಲುವರೆಂದು ನಿಶ್ಚಯಿಸಿ, ಮೊದಲೇ ಎತ್ತರವಾದ ಆ ತೋರಣಸ್ಥಲವನ್ನೇರಿದ್ದುದರಿಂದ ಅದನ್ನು ಗಟ್ಟಿಸುವದಕ್ಕಾಗಿಟ್ಟಿದ್ದ ಕಬ್ಬಿಣದ ಕೊಡತಿಯನ್ನು ತೆಗೆದುಕೊಂಡು ಆನೆಯ ಮೇಲೆ ಇದ್ದಂತೆಯೇ ದೀನನಾದ ವೈರೋಚಕನನ್ನು ಕೊಂದನು.

ರಾಕ್ಷ—ಕಷ್ಟಂ, ಎರಡನರ್ಥಗಳೊದಗಿದುವು. ಚಂದ್ರಗುಪ್ತನು ಸಾಯಲಿಲ್ಲ. ದುರ್ವಿಧಿಯಿಂದ ವೈರೋಚಕ ಬರ್ಬರಕರು ಮಡಿದರು.

ರಾಕ್ಷ—ಆದರೆ ಸೂತ್ರಧಾರನಾದ ದಾರುವರ್ಮನೇನಾದನು ?

ವಿರಾ—ವೈರೋಚಕನ ಮುಂದೆ ತೆರಳುತ್ತಿದ್ದ ಕಾಲಾಳುಗಳೇ ಹೆಂಟೆಗಳಿಂದ ಹೊಡೆದು ಕೊಂದರು.

ರಾಕ್ಷ—(ಕಂಬನಿಗರೆದು) ಕಷ್ಟಂ. ಅಯ್ಯೋ! ಮಿತ್ರನು ವತ್ಸಲನೂ ಆಗಿದ್ದ ದಾರುವರ್ಮನ ವಿಯೋಗವನ್ನು ಪಡೆದೆವು ? ಆದರೆ ಅಲ್ಲಿದ್ದ ಅಭಯದತ್ತನೆಂಬ ವೈದ್ಯನೇನು ಮಾಡಿದನು ?

ವಿರಾಧ—ಎಲ್ಲವನ್ನೂ ಮಾಡಿದನು.

ರಾಕ್ಷ—(ಸಂತೋಷದಿಂದ) ದುರಾತ್ಮನಾದ ಚಂದ್ರಗುಪ್ತನು ಸತ್ತನೆ ?

ವಿರಾಧ—ಅಮಾತ್ಯನೆ! ದೈವಯೋಗದಿಂದ ಸಾಯಲಿಲ್ಲ.

ರಾಕ್ಷ—(ವಿಷಾದದಿಂದ) ಆದರೆ ಎಲ್ಲವನ್ನೂ ಮಾಡಿದನೆಂದೇಕೆ ಹೇಳುವೆ ?

ವಿರಾ—ಅಮಾತ್ಯನೆ! ಆ ವೈದ್ಯನು ಚಂದ್ರಗುಪ್ತನಿಗಾಗಿ ವಿಷಚೂರ್ಣಮಿಶ್ರಿತವಾದ ಔಷಧವನ್ನು ಮಾಡಿಟ್ಟನು. ಅದನ್ನು ಪರೀಕ್ಷಿಸಿದ ಚಾಣಕ್ಯಹತಕನು ಚಿನ್ನದ ಬಟ್ಟಲಲ್ಲಿ ಉಂಟಾದ ವರ್ಣಾಂತರವನ್ನು

ಕಂಡು ಹಿಡಿದು "ವೃಷಲನೆ! ವಿಷಮಿಶ್ರಿತವಾದೀ ಔಷಧವನ್ನು ಕುಡಿಯಬೇಡ" ಎಂದು ಹೇಳಿದನು.

ರಾಕ್ಷ—ಈ ವಟುವು ಎಷ್ಟು ತಂತ್ರಗಾರನು! ಆಮೇಲಾವೈದ್ಯನೇನಾದನು?

ವಿರಾಧ—ಅದೇ ಔಷಧವನ್ನು ಕುಡಿಸಲ್ಪಟ್ಟು ಸತ್ತನು.

ರಾಕ್ಷ—ಅಕಟಾ! ಮಹಾಪ್ರಜ್ಞಾನಿಧಿಯು ನಷ್ಟವಾಯಿತು. ಆಮೇಲೆ ಮಲಗುವ ಮನೆಯ ಯಜಮಾನನಾದ ಪ್ರಮೋದಕನ ವೃತ್ತಾಂತವೇನು?

ವಿರಾ—ಇತರರಿಗಾದುದೇ?

ರಾಕ್ಷ—(ಖಿನ್ನನಾಗಿ) ಅದು ಹೇಗೆ?

ವಿರಾ—ಆ ಮೂರ್ಖನು ತಾವು ಕೊಟ್ಟ ಮಹಾಭಾಗ್ಯವನ್ನು ಪಡೆದು ದುಂದು ವೆಚ್ಚಮಾಡುವುದಕ್ಕೆ ಮೊದಲಿಟ್ಟನು. ತರುವಾಯ ಇಷ್ಟು ಅಧಿಕವಾದ ಧನವು ಹೇಗೆ ಬಂದಿತೆಂದು ಕೇಳಲು, ಪರಸ್ಪರ ವಿರುದ್ಧಗಳಾದ ಉತ್ತರಗಳನ್ನು ಕೊಟ್ಟುದರಿಂದ ಅವನನ್ನು ಚಾಣಕ್ಯಹತಕನು ಚಿತ್ರವಧೆಯಿಂದ ಕೊಲ್ಲಿಸಿದನು.

ರಾಕ್ಷ—(ದುಃಖದಿಂದ) ಏನು? ಇಲ್ಲಿಯೂ ನಾವು ದೈವದಿಂದ ಹತರಾದೆವೆ! ಆದರೆ ಚಂದ್ರಗುಪ್ತನು ಮಲಗಿದಾಗ ಅವನನ್ನು ಕೊಲ್ಲಲು ಮೊದಲೇ ನಮ್ಮಿಂದ ಆಜ್ಞಪ್ತರಾಗಿ ಅರಮನೆಯೊಳಗಿನ ಗೋಡೆಯ ಸುರಂಗದಲ್ಲಿ ನೆಲೆಗೊಂಡಿದ್ದ ಭೀಭತ್ಸಾದಿಗಳ ಸಮಾಚಾರವೇನು?

ವಿರಾ—ಅಮಾತ್ಯನೆ! ಆ ಸಮಾಚಾರವು ದಾರುಣವಾದುದು.

ರಾಕ್ಷ—(ದುಃಖದಿಂದ) ಆ ಸಮಾಚಾರವು ದಾರುಣವು ಹೇಗೆ?

ಅಲ್ಲಿಇದ್ದವರನ್ನು ಚಾಣಕ್ಯಹತಕನು ಕಂಡುಹಿಡಿಯಲಿಲ್ಲವಷ್ಟೆ?

ವಿರಾ—ಅಮಾತ್ಯನೇ! ಅಹುದು, ಚಂದ್ರಗುಪ್ತನು ಶಯನಗೃಹವನ್ನು ಪ್ರವೇಶಿಸುವುದಕ್ಕಿಂತ ಮೊದಲೇ ದುರಾತ್ಮನಾದ ಚಾಣಕ್ಯಹತಕನು ಅಲ್ಲಿಗೆ

ಹೋಗಿ ಚೆನ್ನಾಗಿ ನೋಡಿ ಕೂಡಲೇ ಒಂದಾನೊಂದು ಗೋಡೆಯ ಬಿರುಕಿನಿಂದ ಅನ್ನದ ಅಗುಳುಗಳನ್ನು ಕಚ್ಚಿಕೊಂಡು ಬರುತ್ತಿದ್ದ ಇರುವೆಗಳ ಸಾಲನ್ನು ಕಂಡು "ಈ ಮನೆಯಲ್ಲಿ ಯಾರೋ ಪುರುಷರು ಇರುವರು" ಎಂದು ತಿಳಿದು ಆ ಮನೆಯನ್ನು ಸುಡಿಸಿದನು. ಆ ಮನೆಯು ಸುಡುತ್ತಿರಲು ಕಣ್ಣುಗಳಲ್ಲಿ ಹೊಗೆಯು ತುಂಬಿ ಹೊರಗೆ ಬರುವುದಕ್ಕಾಗಿ ಮೊದಲು ಮಾಡಿಕೊಂಡಿದ್ದ ಬಾಗಿಲು ಸಿಕ್ಕದೆ ಆ ಭೀಭತ್ಸಾದಿಗಳೆಲ್ಲರೂ ಬೆಂಕಿಗೆ ಸಿಕ್ಕಿ ಅಲ್ಲಿಯೇ ಮೃತರಾದರು

ರಾಕ್ಷ—(ಕಂಬನಿಗರೆದು) ಅಯ್ಯೋ! ಕಷ್ಟಂ! ಕಷ್ಟಂ! ಮಿತ್ರನೇ! ದುರಾತ್ಮನಾದ ಚಂದ್ರಗುಪ್ತಹತಕನಿಗಿರುವ ದೈವಾನುಕೂಲ್ಯವನ್ನು ಕಂಡೆಯ?

ವೃ॥ ಅವನನರ್ದಿಸಲ್ ಕಳುಹಿದೆಂ ವಿಷಕನ್ನೆಯನಾಂ ರಹಸ್ಯ
ದ। ಲ್ಲಾ ವಿಷಕನ್ನೆಯಿಂ ಮಡಿದನರ್ಧಹರಂ ನೃಪವರ್ಗಾಳಿ
ಪರ್ವತಂ॥ ಅವಜನಂ ರಸಾಸ್ತ್ರಗಳನಿಟ್ಟಿದೊ ಸತ್ತುಪ
ದೇನಿಮಿತ್ತದಿಂ। ಭಾವಿಸಲೆನ್ನ ನೀತಿಗಳು ಮಾ ವೃಷಲಂ
ಗನುಕೂಲಮಪ್ಪುವೈ॥

ವಿರಾ—ಅಮಾತ್ಯನೆ! ಆದರೂ ಮೊದಲು ಮಾಡಿದುದನ್ನು ಬಿಡಬಾರದಷ್ಟೆ?

ವೃ॥ ಮೊದಲಿಡರಾವಗಂ ಖಳರೆಪರ್ಗಳಿಗಂಜುತೆ ಕಜ್ಜನೊಂದು
ಮಂ। ಮೊದಲಿಡುತಂತರಾಯಂಗಳಿಗಳ್ಕುತೆ ಮಧ್ಯಮ
ರಂತವೈದಿಸರ್॥ ಮೊದಲಿಡಲೆಂದಿಗುಂ ಬಿಡರದಂ ಗುಣ
ಶಾಲಿಗಳುತ್ತಮರ್ಕಳಾ। ಪದವೊಡಗೊಂಡೆಡರ್ಗಳಿ ನಳ
ಲ್ದೊಡ ಮಾಂತಿಹತಮ್ಮ ಯತ್ನಮಂ॥

ಮತ್ತಂ—ವೃತ್ತಂ॥ ಧರೆಯಾಂತಾಯಸ ಮಿರ್ದು ಮಾದಿ
ಫಣಿಪಂ ಭೂಭಾರಮಂ ಮಾಣ್ಬನೇಂ। ಹರಿದಶ್ವಂ ಶ್ರಮ
ಮಾಂತೊಡಂ ನೆಲಸಿರಲ್ಕೇನಕ್ಕು ಮೊತಾರ್ಣದೊಳ್॥

ತೊಡೆಯಲ್ ತಾಂ ಮೊದಲಿಟ್ಟುದಂ ಪಿಸುಣರಂತುದ್ಯೋ
ಗಿಗಳ್ ಸಾಣ್ಬುವರ್ । ತಿರೆಯೊಳ್ ಪೂಣ್ದುದ ನೋಂ
ನಿರ್ವಹಿಪುದೇ ಸಂತರ್ಗೆ ಗೋತ್ರವ್ರತಂ ॥

ರಾಕ್ಷ—ಮಿತ್ರನೆ! ಮೊದಲಿಟ್ಟುದನ್ನು ಬಿಡಬಾರದೆಂಬುದು ನಿಮಗೆ ಪ್ರತ್ಯಕ್ಷ ವಾಗಿಯೇ ಇರುವದಲ್ಲಾ! ಆಮೇಲಾಮೇಲೆ?

ವಿರಾ—ಅದು ಮೊದಲು ಚಾಣಕ್ಯಹತಕನು ಚಂದ್ರಗುಪ್ತನ ಶರೀರದ ವಿಷಯ ದಲ್ಲಿ ಮೊದಲಿಗಿಂತ ಸಾವಿರಪಾಲು ಜಾಗರೂಕನಾಗಿ ಇವರಿಂದ ಇದು ಹೀಗೆಯೇ ಆಗುವುದೆಂದು ಹುಡುಕಿ ಹುಡುಕಿ ಪುರವಾಸಿಗಳಾದ ನಿಮ್ಮ ಆಪ್ತಪುರುಷರನ್ನು ನಿಗ್ರಹಿಸಿದನು.

ರಾಕ್ಷಸ—(ವ್ಯಸನದಿಂದ) ಹೇಳು ಹೇಳು. ಯಾರಾರನ್ನು ನಿಗ್ರಹಿಸಿದನು?

ವಿರಾ—ಮೊದಲು ಜೀವಸಿದ್ಧಿಯೆಂಬ ಕ್ಷಪಣಕನನ್ನು ಅವಮಾನಗೊಳಿಸಿ ಪಟ್ಟಣದಿಂದ ಹೊರಡಿಸಿದನು.

ರಾಕ್ಷ—(ಸ್ವಗತಂ) ಇದು ಸಹ್ಯವೇ, ಸಂಸಾರವಿಲ್ಲದವನನ್ನು ಸ್ಥಾನಭ್ರಂಶವು ಪೀಡಿಸುವುದಿಲ್ಲ. (ಪ್ರಕಾಶಂ) ಮಿತ್ರನೆ! ಯಾವ ಅಪರಾಧವನ್ನು ಹೊರಿಸಿ ಹೊರಡಿಸಿದನು.

ವಿರಾ—ಇವನು ರಾಕ್ಷಸಪ್ರಯುಕ್ತಳಾದ ವಿಷಕನ್ನೆಯಿಂದ ಪರ್ವತೇಶ್ವರ ನನ್ನು ಕೊಲ್ಲಿಸಿದನೆಂದು.

ರಾಕ್ಷ—(ಸ್ವಗತಂ) ಭಾಪು! ಕೌಟಿಲ್ಯನೆ! ಭಾಪು!

ಕಂ॥ ಸಿಂದೆಯುನೊರಸಿದೆ ನಿನ್ನೊಳ್ ।
ತಂದಿರಿಸಿದೆ ನಮ್ಮೊಳ ರ್ಧಹರನ ನಳಿಸಿದೈ ॥
ಸಂದಿಸಿದ ನೀತಿಬೀಜ ವಿ ।
ದೊಂದಾದೊಡ ಮರರೆ! ನಿನಗೆ ಬಹುಫಲವೀಗುಂ ॥

(ಪ್ರಕಾಶಂ) ಆಮೇಲಾಮೇಲೆ.

ವಿರಾಧ—ಆಮೇಲೆ ಶಕಟದಾಸನು ಚಂದ್ರಗುಪ್ತನನ್ನು ಕೊಲ್ಲಿಸುವುದಕ್ಕಾಗಿ

ದಾರುವವರ್ಮಾದಿಗಳನ್ನು ಪ್ರೇರಿಸಿದನೆಂದು ಪಟ್ಟಣದಲ್ಲಿ ಡಂಗುರೆಯನ್ನು ಹೊಯ್ಸಿ ಅವನನ್ನು ಶೂಲಕ್ಕೆ ಹಾಕಿಸಿದನು.

ರಾಕ್ಷ—(ಕಂಬನಿಗರೆದು) ಹಾ! ಮಿತ್ರನಾದ ಶಕಟದಾಸನೆ! ನಿನಗೆ ಇಂತಹ ಮರಣವು ಯುಕ್ತವಲ್ಲ. ಅಥವಾ ಸ್ವಾಮಿಕಾರ್ಯಕ್ಕಾಗಿ ಮಡಿದ ನೀನು ಶೋಚನೀಯನಲ್ಲ. ನಂದಕುಲವು ಹಾಳಾದರೂ ಬದುಕಲೆಳಸುತ್ತಿರುವ ನಾವೇ ಇಲ್ಲಿ ಶೋಚನೀಯರು.

ವಿರಾ—ಅಮಾತ್ಯನೆ! ಸ್ವಾಮ್ಯರ್ಥವನ್ನು ಸಾಧಿಸಬೇಕೆಂದೇ ಅಲ್ಲವೆ? ಪ್ರಯತ್ನಿಸುತ್ತಿರುವೆ.

ರಾಕ್ಷ—ಮಿತ್ರನೇ!

ಕಂ॥ ಪರಲೋಕವನುನೊಂದಿದ ದೇ।
ವರ ನನುಸರಿಸ ಕೃತಘ್ನ ರಿದನರಿತೀಗಳ್ ॥
ಪೊರೆದ ರೆಸಕಗಳ ನೊಲವಿಂ।
ತಿರಗೊಳಿಸಲ್ ತಿರೆಯೊಳಿಮಗೆ ಜೀವಿತದೊಲವೈ॥

ಮತ್ತೊಬ್ಬ ಮಿತ್ರನ ದುಃಖವನ್ನು ಕೇಳುವುದಕ್ಕೂ ಸಿದ್ಧನಾಗಿರುವೆನು ಹೇಳು.

ವಿರಾ—ಇದನ್ನು ತಿಳಿದು ಚಂದನದಾಸನು ಅಮಾತ್ಯನ ಕುಟುಂಬವನ್ನು ಬೈಚಿಟ್ಟನು.

ರಾಕ್ಷ—ಕ್ರೂರನಾದ ಚಾಣಕ್ಯವಟುವಿಗೆ ವಿರೋಧವಾಗಿ ಅವನು ಮಾಡಿದುದು ಯುಕ್ತವಲ್ಲ.

ವಿರಾ—ಅಮಾತ್ಯನೆ! ಮಿತ್ರದ್ರೋಹವು ಇನ್ನೂ ಯುಕ್ತವಲ್ಲವಲ್ಲ!

ರಾಕ್ಷ—ಆಮೇಲಾಮೇಲೆ?

ವಿರಾ—ಆ ಬಳಿಕ ಇವನು ಕೇಳಿಕೊಂಡರೂ ಚಂದನದಾಸನು ಅಮಾತ್ಯನ ಕುಟುಂಬವನ್ನು ಯಾವಾಗ ಒಪ್ಪಿಸಲಿಲ್ಲವೊ, ಆಗ ಚಾಣವಟುವು ಬಹಳ ಕುಪಿತನಾಗಿ,

ರಾಕ್ಷ—(ದುಃಖದಿಂದ) ಕೊಂದುಹಾಕಲಿಲ್ಲವಲ್ಲ !

ವಿರಾ—ಇಲ್ಲ. ಇಲ್ಲ. ಮನೆಯ ಆಸ್ತಿಯೆಲ್ಲವನ್ನೂ ಮುಟ್ಟುಗೋಲುಹಾಕಿ ಹೆಂಡಿರು ಮಕ್ಕಳೊಡನೆ ಅವನನ್ನು ಸೆರೆಯಲ್ಲಿಡಿಸಿದನು.

ರಾಕ್ಷ—ಆದರೆ ರಾಕ್ಷಸನ ಕುಟುಂಬವನ್ನು ಬೈಚಿಟ್ಟನೆಂದು ಸಂತುಷ್ಟನಾಗಿ ಏಕೆ ಹೇಳುವೆ? ರಾಕ್ಷಸನೇ ಪತ್ನೀ ಪುತ್ರರೊಡನೆ ಸೆರೆಗೆ ಬಿದ್ದನೆಂದು ಹೇಳಬೇಕಲ್ಲವೆ ?

ಸೇವಕಂ—(ಪ್ರವೇಶಿಸಿ) ಜಯ ವಾಗಲಿ ಆರ್ಯನಿಗೆ. ಇದೊ ಶಕಟದಾಸನು ಬಾಗಿಲಲ್ಲಿರುವನು.

ರಾಕ್ಷ—ಅಯ್ಯೋ! ದಿಟವೆ?

ಸೇವ—ಸ್ವಾಮಿ ಪಾದಗಳಲ್ಲಿ ಸುಳ್ಳನ್ನು ಬಿನ್ನವಿಸುವೆನೆ ?

ರಾಕ್ಷ—ಮಿತ್ರ ವಿರಾಧಗುಪ್ತನೆ ! ಇದೇನು ?

ವಿರಾ—ಅಮಾತ್ಯನೆ ! ಹೀಗೂ ಆಗಬಹುದು. ಏಕೆಂದರೆ " ಭವ್ಯಂರಕ್ಷತಿ ಭವಿತವ್ಯತಾ " ಎಂದರಿಯೆಯಾ ?

ರಾಕ್ಷ—ಪ್ರಿಯಂವದಕನೆ ! ಇನ್ನೂ ಏಕೆ ತಡಮಾಡುವೆ ? ಅವನನ್ನು ಬೇಗ ಕರೆದುಕೊಂಡು ಬಾ.

ಸೇವ—ಹಾಗೆ ಆಗಲಿ (ಎಂದು ಹೊರಟು ಹೋದನು).

(ಅನಂತರದಲ್ಲಿ ಸಿದ್ಧಾರ್ಥಕನು ಶಕಟದಾಸನೂ ಬಂದರು).

ಶಕಟ—(ಸ್ವಗತಂ)

ವೃ॥ ಪರಿಕಿಸಿ ಮೌರ್ಯಸಂತೆ ನೆಲೆಗೊಂಡಿಹ ಶೂಲಮನಾತ
ನೊಂದಿದ್ದೈ । ಸಿರಿವೊಲೆ ಚಿತ್ತಮಂ ಮಥಿಪ ಮೂರ್ಧ
ಕಡರ್ದಿಪ ಪುಷ್ಪಮಾಲ್ಯಮುಂ ॥ ನಿರುಕಿಸಿ ರಾಜರೋ
ಧವೆನೆ ರೌದ್ರಭಯಂಕರ ತೂರ್ಯನಾದಮಂ ॥ ಬಿರಿ
ಯದು ಮನ್ಮನಂ ಮೊದಲೊಳಾಂತಘಿಘಾತ ಕಠೋರ
ಭಾವದಿಂ ॥ (ಎಂದು ಓಳಗೆ ಬಂದು ನೋಡಿ ಸಂತೋಷದಿಂದ

ಇದೊ! ಅಮಾತ್ಯರಾಕ್ಷಸನು ಕುಳಿತಿರುವನು. ಯಾವನಾದರೆ —

ಕಂ || ಅಳಿದೊಡ ಮಾಣ್ಮಂ ಭಕ್ತಿಯು |
ನುಳಿಯದೆ ತತ್ಸ್ವಾಮಿಕಾರ್ಯಮಂ ಬೆಳೆಯಿಸುತುಂ ||
ಇಳೆಯೊಳಿಹ ರಾಜಭಕ್ತಾ |
ವಳಿಯೊಳ್ ಪರಮ ಪ್ರಮಾಣದೊಳ್ ನೆಲಸಿರ್ಪಂ ||

(ಬಳಿಗೆ ಹೋಗಿ) ಅಮಾತ್ಯನಿಗೆ ಜಯವಾಗಲಿ

ರಾಕ್ಷ—(ನೋಡಿ ಸಂತೋಷದಿಂದ) ಮಿತ್ರ ಶಕಟದಾಸನೆ! ಕೌಟಿಲ್ಯದೃಷ್ಟಿ ಗೋಚರನಾದರೂ ನಿನ್ನನ್ನು ಮರಳಿ ನೋಡಿದುದು ದೈವಯೋಗವೇ ಸರಿ. ಆದುದರಿಂದ ನನ್ನನ್ನು ಆಲಿಂಗಿಸು.

ಶಕಟ—(ಹಾಗೆ ಮಾಡುವನು).

ರಾಕ್ಷ—(ಬಹಳಹೊತ್ತು ಆಲಿಂಗಿಸಿಕೊಂಡು) ಈ ಪೀಠದಲ್ಲಿ ಕುಳಿತುಕೊ.

ಶಕಟ—(ಕುಳಿತುಕೊಂಡಂತೆ ನಟಿಸುವನು)

ರಾಕ್ಷ—ಮಿತ್ರನೆ! ಇಂತಹ ನನ್ನ ಮನಸ್ಸಂತೋಷಕ್ಕೆ ಕಾರಣರಾರು ?

ಶಕಟ—(ಸಿದ್ಧಾರ್ಥಕನನ್ನು ತೋರಿಸಿ) ಈ ಪ್ರಿಯಮಿತ್ರನಾದ ಸಿದ್ಧಾರ್ಥಕನು ಘಾತುಕರನ್ನೋಡಿಸಿ ವಧ್ಯಸ್ಥಾನದಿಂದ ನನ್ನನ್ನು ಹೊರಡಿಸಿಕೊಂಡು ಬಂದನು.

ರಾಕ್ಷ—(ಸಂತೋಷದಿಂದ)ಅಯ್ಯಾ ಸಿದ್ಧಾರ್ಥಕನೆ! ಈ ಉಪಕಾರಕ್ಕೆ ಏನು ಕೊಟ್ಟರೆ ಸಾಕಾದೀತು ? ಆದರೂ ಇದನ್ನು ತೆಗೆದುಕೊ,

(ಎಂದು ತನ್ನ ಶರೀರದಿಂದ ಒಡವೆಗಳನ್ನು ತೆಗೆದು ಕೊಡುವನು)

ಸಿದ್ಧಾರ್ಥ—( ತೆಗೆದುಕೊಂಡು ಕಾಲಿಗೆರಗಿ ತನ್ನಲ್ಲಿ ತಾನು ) ಇದೇ ಅಲ್ಲವೇ ? ಆರ್ಯೋಪದೇಶವು. ಆಗಲಿ ಹಾಗೆಯೇ ಮಾಡುವೆನು. (ಪ್ರಕಾಶಂ) ಅಮಾತ್ಯನೆ! ತಾವಿತ್ತ ಬಹುಮಾನವನ್ನು ಎಲ್ಲಿಯಾದರೂ ಇಟ್ಟು ಕೊಂಡು ಸುಖವಾಗಿರುವೆನೆಂದರೆ, ಹೊಸದಾಗಿ ಬಂದಿರುವ ನನಗೆ ಇಲ್ಲಿ ಯಾರೂ ಪರಿಚಿತರಿಲ್ಲ. ಆದುದರಿಂದ ಇದನ್ನು ಈ ಮುದ್ರೆಯಿಂದ

ಮುದ್ರಿಸಿ ಅಮಾತ್ಯನ ಭಂಡಾರದಲ್ಲಿಯೇ ಇಟ್ಟಿರಬೇಕೆಂದು ಬಯಸು ವೆನು. ನನಗೆ ಬೇಕಾದಾಗ ತೆಗೆದುಕೊಳ್ಳುವೆನು.

ರಾಕ್ಷ—ಭದ್ರನೆ ! ದೋಷವೇನು ? ಶಕಟದಾಸನೆ ! ಹೀಗೆಯೇ ಮಾಡು.

ಶಕಟ—ಅಮಾತ್ಯನಾಜ್ಞೆಯಂತಾಗಲಿ. (ಮುದ್ರೆಯನ್ನು ಕಂಡು ಜನಾಂತಿಕಂ) ಅಮಾತ್ಯನೆ! ಈ ಮುದ್ರೆಯು ನಿನ್ನ ಹೆಸರಿನದು

ರಾಕ್ಷ—(ನೋಡಿ ಆಗ್ಮಗತಂ) ನಾನು ಪಟ್ಟಣದಿಂದ ಹೊರಟುಬರುವಾಗ ನನ್ನ ಕೈಯಲ್ಲಿದ್ದ ಉಂಗುರವನ್ನು ಉತ್ಕಂಠಾವಿನೋದಕ್ಕಾಗಿ ಮಡದಿಯು ತೆಗೆದುಕೊಂಡಳು ; ದಿಟ. ಆದರೆ ಅದು ಇವನ ಕೈಗೆ ಹೇಗೆ ಬಂದಿತು ? (ಪ್ರಕಾಶಂ) ಅಯ್ಯಾ ಸಿದ್ಧಾರ್ಥಕನೆ ! ಇದು ನಿನಗೆಲ್ಲಿ ಸಿಕ್ಕಿತು ?

ಸಿದ್ಧಾ—ಕುಸುಮಪುರದಲ್ಲಿ ಚಂದನದಾಸನೆಂಬ ರತ್ನವ್ಯಾಪಾರಿಯು ಇರು ವನು. ಆತನ ಮನೆಯ ಬಾಗಿಲ ಬಳಿಯಲ್ಲಿ ಬಿದ್ದಿದ್ದಿತು. ನನಗೆ ಸಿಕ್ಕಿತು

ರಾ—ಯುಕ್ತವು.

ಸಿದ್ಧಾ—ಅಮಾತ್ಯನೆ ! ಇಲ್ಲಿ ಯುಕ್ತವೇನು ?

ರಾ—ಅಯ್ಯಾ! "ಇಂತಹ ಪದಾರ್ಥವು ಬಿದ್ದಿದ್ದು ಸಿಕ್ಕಬೇಕಾದರೆ ಅದು ಮಹಾ ಧನಿಕರ ಮನೆಯೇ ಆಗಿರಬೇಕು" ಎಂಬುದು.

ಶಕಟ—ಮಿತ್ರ ಸಿದ್ಧಾರ್ಥಕನೆ ! ಈ ಮುದ್ರೆಯು ಅಮಾತ್ಯನ ಹೆಸರಿನದು. ಇದಕ್ಕಿಂತಲೂ ಹೆಚ್ಚಾದ ದ್ರವ್ಯದಿಂದ ಅಮಾತ್ಯನು ನಿನ್ನನ್ನು ಸಂತೋಷ ಗೊಳಿಸುವನು. ಇದನ್ನು ಕೊಡು

ಸಿದ್ಧಾ—ಆರ್ಯನೆ! ಅಮಾತ್ಯನು ಈ ಮುದ್ರೆಯನ್ನು ಪರಿಗ್ರಹಿಸುವುದು ಅನುಗ್ರಹಿಸಿದಂತಲ್ಲವೆ ? (ಎಂದು ಮುದ್ರೆಯನ್ನೊಪ್ಪಿಸುವನು).

ರಾಕ್ಷ—ಅಯ್ಯಾ ಶಕಟದಾಸನೆ ! ಇದೇ ಮುದ್ರೆಯಿಂದಲೇ ಇನ್ನು ಮೇಲೆ ನಿನ್ನ ಅಧಿಕಾರವನ್ನು ನಡೆಯಿಸು.

ಶಕಟ—ಅಮಾತ್ಯನಾಜ್ಞೆಯಂತಾಗಲಿ.

ಸಿದ್ಧಾ—ಅಮಾತ್ಯನೆ! ಒಂದು ಬಿನ್ನಪವುಂಟು.

ರಾಕ್ಷ—ಧಾರಾಳವಾಗಿ ಹೇಳು

ಸಿದ್ಧಾ—ಚಾಣಕ್ಯವಟುವಿಗೆ ಅಪಕಾರವನ್ನು ಮಾಡಿದ ನನಗೆ ಮರಳಿ ಪಾಟಲೀ ಪುರಪ್ರವೇಶವು ಇಲ್ಲವೆಂಬುದು ಅಮಾತ್ಯನಿಗೆ ತಿಳಿದೇ ಇರುವುದಷ್ಟೆ? ಆದುದರಿಂದ ಅಮಾತ್ಯನ ಪಾದಗಳನ್ನೇ ಸೇವಿಸುವುದಕ್ಕೆ ಬಯಸುವೆನು.

ರಾಕ್ಷ—ಅಯ್ಯಾ! ನಮಗೆ ಸಂತೋಷವು. ಆದರೆ ನಿನ್ನ ಅಭಿಪ್ರಾಯವನ್ನು ತಿಳಿಯದುದರಿಂದ ನಾವೇ ಮೊದಲು ನಿನ್ನನ್ನು ಸಂತೈಸಲು ವಿಲಂಬ ವಾಯಿತು; ಹಾಗೆಯೇ ಮಾಡು.

ಸಿದ್ಧಾ—(ಸಂತೋಷದಿಂದ) ಅನುಗೃಹೀತನಾದೆನು.

ರಾಕ್ಷ—ಶಕಟದಾಸನೆ! ಸಿದ್ಧಾರ್ಥಕನನ್ನು ವಿಶ್ರಾಂತಿ ಗೊಳಿಸು.

ಶಕಟ—ಹಾಗೆಯೇ (ಎಂದು ಸಿದ್ಧಾರ್ಥಕನೊಡನೆ ಹೊರಟು ಹೋದನು)

ರಾಕ್ಷ—ಮಿತ್ರ ವಿರಾಧಗುಪ್ತನೆ! ಉಳಿದ ಚರಿತ್ರೆಯನ್ನು ವಿವರಿಸು. ಚಂದ್ರ ಗುಪ್ತನ ಕಡೆಯವರು ನಮ್ಮ ಭೇದತಂತ್ರಗಳನ್ನು ನಂಬಿರುವರೆ?

ವಿರಾಧ—ಅಮಾತ್ಯನೆ! ಅಹುದು, ನಂಬಿರುವರು. ಪ್ರಕಾಶವಾಗಿ ಅನುಸರಿ ಸುತ್ತಲೂ ಇರುವರು.



ರಾಕ್ಷ—ಮಿತ್ರನೆ! ಅಲ್ಲಿ ಪ್ರಕಾಶವೇನು?

ವಿರಾಧ—ಅಮಾತ್ಯನೆ! ಇದು ಅಲ್ಲಿಪ್ರಕಾಶವು. ಮಲಯಕೇತು ಓಡಿ ಬಂದುದು ಮೊದಲುಗೊಂಡು ಚಂದ್ರಗುಪ್ತನು ಚಾಣಕ್ಯನಮೇಲೆ ಕೋಪ ಗೊಂಡಿರುವನು. ಚಾಣಕ್ಯನೂ ಜಯಶೀಲನಾದುದರಿಂದ ಚಂದ್ರಗುಪ್ತ ನನ್ನು ಲೆಕ್ಕಿಸದೇ ಆ ಆ ಆಜ್ಞಾಭಂಗಗಳಿಂದ ಆತನ ಮನಸ್ಸಿಗೆ ಖೇದ ವನ್ನುಂಟುಮಾಡುತ್ತಿರುವನು. ನನ್ನ ಅನುಭವವೂ ಹೀಗೆಯೇ.

ರಾಕ್ಷ—(ಸಂತೋಷದಿಂದ) ಮಿತ್ರ ವಿರಾಧಗುಪ್ತನೆ! ನೀನು ಇದೇ ಹಾವಾಡಿ ಗನ ವೇಷದಿಂದ ಮರಳಿ ಕುಸುಮಪುರಕ್ಕೆ ತೆರಳು. ಅಲ್ಲಿ ನನ್ನ ಪ್ರಿಯ

ಮಿತ್ರನಾದ ಸ್ತನಕಲಶನೆಂಬವನು ವೈತಾಳಿಕ ವೇಷದಿಂದ ವಾಸಿಸುತ್ತಿರು ವನು. ಅವನಿಗೆ ನನ್ನ ಈ ಮಾತನ್ನು ತಿಳುಹಿಸು. "ಚಾಣಕ್ಯನು ಆಜ್ಞಾಭಂಗಗಳನ್ನು ಮಾಡುವ ಸಮಯದಲ್ಲಿ ಉತ್ತೇಜಕಗಳಾದ ಪದ್ಯ ಗಳಿಂದ ಚಂದ್ರಗುಪ್ತನನ್ನು ಸ್ತುತಿಸಬೇಕು. ಮುಂದಣ ಕಾರ್ಯಗಳನ್ನು ಅತಿರಹಸ್ಯವಾಗಿ ಕರಭಕನಲ್ಲಿ ಹೇಳಿ ಕಳುಹಿಸಬೇಕೆಂದು"

ವಿರಾ—ಅಮಾತ್ಯನಾಜ್ಞೆಯಂತಾಗಲಿ (ಎಂದು ಹೊರಟು ಹೋದನು).

ಸೇವ—(ಪ್ರವೇಶಿಸಿ) ಅಮಾತ್ಯನೆ! ಇದೊ ಈ ಮೂರು ರತ್ನಾಲಂಕಾರಗಳ ತೊಡಿಗೆಗಳು ಮಾರಾಟಕ್ಕೆ ಬಂದಿರುವುವು. ಅಮಾತ್ಯನು ಪರಾಮರಿಸ ಬೇಕೆಂದು ಶಕಟದಾಸನು ಬಿನ್ನವಿಸುತ್ತಿರುವನು

ರಾಕ್ಷ—(ನೋಡಿದಂತೆ ನಟಿಸಿ) ಆಹಾ! ಆಭರಣಗಳು ಅಮೋಘಗಳಾಗಿರು ವುವು. ಅಯ್ಯಾ! ಮಾರುವವರನ್ನು ಸಂತೋಷಗೊಳಿಸಿ ತೆಗೆದುಕೊಳ್ಳ ಬಹುದೆಂದು ನಾನು ಹೇಳಿದಂತೆ ಶಕಟದಾಸನಿಗೆ ತಿಳುಹಿಸು.

ಪುರು—ಹಾಗೆ (ಎಂದು ಹೊರಟುಹೋದನು).

ರಾಕ್ಷ—ನಾನೂ ಕುಸುಮಪುರಕ್ಕೆ ಕರಭಕನನ್ನು ಕಳುಹಿಸುವೆನು (ಎಂದೆದ್ದು) ದುರಾತ್ಮನಾದ ಚಾಣಕ್ಯನಿಂದ ಚಂದ್ರಗುಪ್ತನು ಬೇರೆಯಾದಾನೆ? ಅಥವಾ ನಮ್ಮ ಇಷ್ಟಾರ್ಥವು ನೆರವೇರಿತೆಂದೇ ತಿಳಿಯುವೆನು. ಏಕೆಂದರೆ_

ವೃ॥ ಅರಸರ್ಗೆ ನಧಿರಾಜನೆಂದು ಮಲೆತಿರ್ಪಂ ಮೌರ್ಯನೆನ್ನಿಂದಿನಂ। ಧರಣೀಪಾಲಕನಾದನೆಂದೆನುತಮಂ ಚಾಣಕ್ಯನುಂ ಬೀಗಿಹಂ॥ ದೊರೆದಾ ರಾಜ್ಯದೆ ಧನ್ಯನೊರ್ವನಪರಂ ತೀರ್ಣಪ್ರತಿಜ್ಞಂ ಕೃತಾಂ। ತರಮಾದೀ ಕೃತಕೃತ್ಯಭಾವಮುಸರೊಳ್ ತಾಂ ಭೇದಮಂ ಪುಟ್ಟಕುಂ॥

(ಎಂದೆಲ್ಲರೂ ತೆರಳಿದರು)

ದ್ವಿತೀಯಾಂಕಂ ಸಮಾಪ್ತಂ.



# ತೃತೀಯಾಂಕಂ.

---

(ಆನಂತರದಲ್ಲಿ ಕಂಚುಕಿಯು ಪ್ರವೇಶಿಸುವನು)

ಕಂಚು—(ನಿರ್ವೇದದಿಂದ)

ವೃ|| ಪಡೆದೆಯೊ ಜನ್ಮವಾವ ವಿಷಯಂಗಳಿಗಾಸಿಸಿ ದಿಂದ್ರಿಯಂ
ಗಳಿಂ | ಮಡಿದುದಲಾ! ತದಿಂದ್ರಿಯಗಳೊಳ್ ವಿಷಯ
ಗ್ರಹಕೌಶಲಂ ವಲಂ|| ಕಿಡುತಿದೆ ನಿನ್ನಧೀನವೆನಿಪಂಗದೊ
ಳುಂ ನಿಜಶಕ್ತಿ ನಿನ್ನವೋ | ಲಡರ್ದಡಿಯಿಟ್ಟುದೀ ಮುದಿ
ತನಂ ಬರಿದೇಕೆ ಬಳಲ್ವೆ? ತೃಷ್ಣೆಯೆ! ||

(ಎಂದು ನಡೆದು ಆಕಾಶದಲ್ಲಿ ಕಿವಿಗೊಟ್ಟು)

ಎಲೈ ಸುಗಾಂಗಪ್ರಾಸಾದಾಧಿಕಾರಿಗಳಿರಾ! ಪ್ರಖ್ಯಾತನಾಮಧೇಯನಾದ ಚಂದ್ರಗುಪ್ತಮಹಾರಾಜನು ನಿಮಗಾಜ್ಞಾಪಿಸುತ್ತಿರುವನು. “ಕೌಮುದೀಮಹೋತ್ಸವದಿಂದ ಅತಿರಮಣೀಯವಾದ ಕುಸುಮಪುರವನ್ನು ನೋಡಲಪೇಕ್ಷಿಸುವೆನು. ಆದುದರಿಂದ ನಾವು ನೋಡಬಹುದಾದ ಸುಗಾಂಗ ಪ್ರದೇಶಗಳನ್ನು ಅಲಂಕರಿಸಬೇಕು” ಎಂದು

(ತಿರುಗಿ ಆಕಾಶದಲ್ಲಿ ಕಿವಿಗೊಟ್ಟು)

ಏನು ಹೇಳುವಿರಿ? “ಆರ್ಯನೆ! ಕೌಮುದೀಮಹೋತ್ಸವವು ನಿಲ್ಲಿಸಲ್ಪಟ್ಟಿರುವುದೆಂದು ಮಹಾರಾಜನಿಗೆ ತಿಳಿಯಲಿಲ್ಲವೋ” ಎಂದೊ? ಆಹಾ! ನಿರ್ಭಾಗ್ಯರಿರಾ! ಈ ಪ್ರಾಣಾಪಹಾರಕವಾದ ಕಥೆಯು ನಿಮಗೇಕೆ? ಈಗಲೇ ಬೇಗ—

ವೃ|| ಪರಿಮಳಧೂಪದಿಂ ಮೆರೆವ ಕಂಬಗಳಂ ಸುಮಮಾಲೆಗಳ್
ಸುಧಾ! ಕರಕಿರಣಾಭ ಚಾಮರ ಕರಾವಳಿಗಳ್ ಬಳಸಿರ್ಕೆ
ಸಿಂಹ ವಿ|| ಷ್ಟರ ದತಿಭಾರವುಂ ಧರಿಸಿ ಮೂರ್ಛೆಯನಾಂ
ತವೊಲಿರ್ಪ ಭೂಮಿಯೊಳ್ | ಕರೆವುದು ಬೇಗದಿಂ ಕುಸು
ಮಬಂಧುರಚಂದನಗಂಧತೋಯಮಂ ||

ಏನು ಹೇಳುವಿರಿ ? “ ಅರ್ಜುನನೆ ! ಇದೊ ಸ್ವಾಮಿಯಾಜ್ಞೆಯನ್ನು ನಡೆಯಿಸುವೆವು ” ಎಂದೊ ? ಆರ್ಯಾ ! ತ್ವರೆಪಡಿಸಿಂ. ಇದೋ ಚಂದ್ರಗುಪ್ತಮಹಾರಾಜನು ಬಂದೇಬಿಟ್ಟನು. ಯಾಕನಾದರೆ,

ವೃ|| ಗಹನಮೆನಿಪ್ಪ ದಾರಿಗಳೊಳುಂ ಕೆಡದಿರ್ಪ ದೃಢಾಂಗದಿಂದೆ ದು|ರ್ವಹಮೆನಿಪಾವ ಭೂಭರವನಾಂತನೊ ತನ್ನಯ ತಾತ ನಂತದಂ || ವಹಿಸಲಿವಂ ಶಿಶುತ್ವದೊಳೆ ಯತ್ನಮನಾಂತ ಳವಿಲ್ಲದೊರ್ವ ತಾಂ|ಸಹಿಸದೆ ಬಿಳ್ದೊಡಂ ಮನದ ಸಂತಸ ದಿಂ ದೆಣಿಸಂ ಸ್ವದುಃಖಮಂ ||

(ತೆರೆಯಲ್ಲಿ) ಸ್ವಾಮಿಯು ಇತ್ತಿತ್ತ ಬಿಜಯಮಾಡಬೇಕು.

(ಅನಂತರದಲ್ಲಿ ರಾಜನು ಪ್ರತೀಹಾರಿಯೂ ಪ್ರವೇಶಿಸುವರು)

ರಾಜಂ—(ಸ್ವಗತಂ) ರಾಜ್ಯವೆಂಬುದು ರಾಜಧರ್ಮಗಳನ್ನು ಅನುಸರಿಸುವ ರಾಜನಿಗೆ ಬಹಳ ಅಪ್ರೀತಿಕರವಾದುದೇ ಸರಿ. ಏಕೆಂದರೆ—

ವೃ|| ಪರರೆಸಕಂಗಳಲ್ಲಿರೆ ನೃಪಂ ಸ್ವಸುಖಂಗಳನಾಂಪುದಿಲ್ಲ ತಾಂ| ತೊರೆಯೆ ನಿಜೋಪಭೋಗಮನವಂ ಧರಣೀಪತಿಯಲ್ತು ನಿಕ್ಕುವಂ || ಪರವಶನಕ್ಕು ಮನ್ಯರೆಸಕಂ ಪಿರಿದಾಗೆ ನಿಜಾರ್ಥದತ್ತಣಿಂ | ಪರವಶನಪ್ಪ ಪೂರುಷನದೆಂತರಿವಂ ನಿಜ ಭೋಗಸೌಖ್ಯಮಂ ||

ಮತ್ತು ರಾಜ್ಯಲಕ್ಷ್ಮಿಯನ್ನು ಸೇವಿಸುವುದು ಆತ್ಮನೇತ್ರರಾದ ರಾಜರಿಗೂ ಸಾಧ್ಯವಲ್ಲ ಏಕೆಂದರೆ-

ವೃ|| ಪರಿಭವಕಳ್ಕಿ ಸಂತರ ನಗಲ್ದಪ ಳುಬ್ಬೆಗದಿಂದೆ ತೀಕ್ಷ್ಣರಂ ತೊರೆದಪ ಳಜ್ಞರಂ ಪಳಿವ ಳಾದರಿಸಳ್ ವಿಬುಧಾಗ್ರಗಣ್ಯರಂ | ಧುರಧರ ಶೂರರೊಳ್ ಬೆದರುವಳ್ ಕಮಭೀತರ ನಂತು ಹಾಸ್ಯದಿಂ | ಜರೆದಪ ಳಾಲಿಸಲ್ ಸಿರಿದುರಾಸದೆ ಪ್ರೌಢತೆವೆತ್ತ ವೇಶಿವೋಲ್ ||

ಇಂತಿದ್ದರೂ "ಕಪಟಕಲಹವಂ ಮಾಡಿ ನೀನೇ ಕೆಲವುಕಾಲ ಸ್ವತಂತ್ರನಾಗಿ ಆಳಬೇಕು" ಎಂದು ಆರ್ಯನಪ್ಪಣೆಯಾಗಿರುವುದು. ನಾನದನ್ನು ಹೇಗೋ ಮಹಾಪಾತಕದಂತೊಪ್ಪಿಕೊಂಡೆನು. ಅಥವಾ ಬಾರಿಬಾರಿಗೂ ಗುರೂಪದೇಶದಿಂದ ಶಿಕ್ಷಿತರಾದ ನಾವು ಯಾವಾಗಲೂ ಸ್ವತಂತ್ರರೇ ಸರಿ ಏಕೆಂದರೆ—

ವೃ॥ ಸಲ್ಲುವಕಜ್ಜಮುಂರಚಿಪ ಶಿಷ್ಯನವಂ ತಡೆಯಾಂಪುದಿಲ್ಲ
ಮಂ। ತಲ್ಲಡೆ ಮೋಹದಿಂದುಳಿಯೆ ಪಾರಿಯು ನಾ ಗುರುವ
ಕ್ಕು ಮಂಕುಶಂ॥ ಬಲ್ಲಿದರಾವಗಂ ವಿನಯಕಾಂಕ್ಷಿಗಳಾ
ಕತದಿಂ ಸ್ವತಂತ್ರರಾ। ವೆಲ್ಲಿಯುಂ ಮಾಡೊಡಂ ವಿಮುಖ
ರಲ್ತೆ! ನಿರಂಕುಶವಾಗಿ ವರ್ತಿಸಲ್॥

(ಪ್ರಕಾಶಂ) ಆರ್ಯವೈಹೀನರೆ! ಸುಗಾಂಗದ ದಾರಿಯನ್ನು ತೋರಿಸು

ಕಂಚು—ಸ್ವಾಮಿಯು ಇತ್ತಿತ್ತ ಬಿಜಮಾಡಬೇಕು (ನಡೆದಂತೆ ನಟಿಸಿ) ಇದೊ ಸುಗಾಂಗಪ್ರಾಸಾದವು. ಸ್ವಾಮಿಯು ಮೆಲ್ಲನೆ ಹತ್ತಬೇಕು.

ರಾಜಂ—(ಹತ್ತಿದಂತೆ ನಟಿಸಿ ದಿಕ್ಕುಗಳನ್ನು ನೋಡಿ) ಆಹಾ! ಶರತ್ಕಾಲದಿಂದ ಕಳೆದುಂಬಿರುವ ದಿಕ್ಕುಗಳೆಷ್ಟು ರಮಣೀಯಗಳಾಗಿರುವುವು? ಏಕೆಂದರೆ—

ವೃ॥ ನಸುಕೃಶವಾದ ಬೆಳ್ಮುಗಿಲ ಸುಣ್ಮರಲಿಂ ನೆರೆದಿಂಚರಂ
ಗಳಿಂ। ದೆಸೆ ಪರಸಂಚೆವಿಂಡುಗಳಿ ಸಂದಮನೊಂದಿರುಳಲ್ಲಿ
ಚಿತ್ರಮಂ॥ ಪಸರಿಪ ಮಾಳ್ಕೆಯಿಂ ಮೆರೆವ ತಾರಗೆನೈದಿಲೆ
ಯಿಂದೆ ಶೋಭಿಪೀ। ದೆಸೆಯನಿತುಂ ಮಹಾನದಿಗಳಂದದೆ
ಬಾಂದಳದಿಂದೆ ಬೀಳ್ವುವೈ॥ ಮತ್ತಂ,

ವೃ॥ ದಾರಿಯುಮಿಾರಿ ಪಾರುತಿಹನೀರಿಗೆ ತನ್ನಯ ದಾರಿದೋರು
ತಂ। ಭೂರಿಫಲಂಗಳಿಂದೆ ನಿಗೆ ಸೊರ್ಕಿದಶಾಲಿಯಬಾಗಿ
ಸುತ್ತೆ ಮಾ॥ ಯೂರಮದಾತಿರೇಕಮನಡಂಗಿಸುತಂ ವಿಷ
ದಂತೆ ಪೊಲ್ ಜಗ। ಕ್ಕಾರಯೆ ನೀತಿಯಂ ಕಲಿಸುವಂತಿ
ಹುದೀ ಶರದಾಗಮಂ ನವಂ॥

ವೃ॥ ರತಿಕಥೆಯೊಳ್ ಪ್ರವೀಣೆಯುಹ ದೂತಿವೊಲೀ ಶರದಂ ಪಲಂ
ಬರಂ । ಸತಿಯುರನಾಂತ ಕಾಂತನೊಳಗಾಪರಿ ಕೋಪವ
ನೊಂದಿ ಕಾರ್ಶ್ಯವೆ। ಯ್ದುದ್ಧತವಿಹ ಗಂಗೆಯುವಿನಯುದೆಂ
ತುಟೊ ದಾರಿಗೆತಂದು ಸುಪ್ರಸ । ನ್ನತೆಯು ನವುಚರ್ಳಶೀ
ಗೆರೆಯುನಲ್ಲಿಗೆ ತಾಂ ಕರೆದೊಯ್ದಪಳ್ ದಿಟಂ ॥

(ಸುತ್ತಲೂ ನೋಡಿದಂತೆ ನಟಿಸಿ)

ಓಹೋ! ಇದೇನು? ಕುಸುಮಪುರದಲ್ಲಿ ಕೌಮುದೀಮಹೋ
ತ್ಸವವು ನಡೆಯುವಂತೆ ತೋರುವುದಿಲ್ಲ. ಆರ್ಯವೈಹೀನರೆ! ನಮ್ಮ ಅಪ್ಪಣೆ
ಯಂತೆ ಕುಸುಮಪುರದಲ್ಲಿ ಕೌಮುದೀಮಹೋತ್ಸವವು ಸಾರಲ್ಪಟ್ಟಿತೊ?

ಕಂಚು—ಆಹುದು

ರಾಜಂ—ಆದರೆ ಪಟ್ಟಣಿಗರು ನಮ್ಮ ಅಪ್ಪಣೆಯನ್ನು ನಡೆಯಿಸಲಿಲ್ಲವೊ?

ಕಂಚು—(ಕಿವಿಗಳನ್ನು ಮುಚ್ಚಿ) (ಶಿವ ಶಿವ)—
ಪೃಥ್ವಿಯಲ್ಲಿ ಯಾವಾಗಲೂ ತಿರಸ್ಕೃತವಾಗದ ದೇವರಾಜ್ಞೆಯನ್ನು
ನಾಗರಿಕರು ಹೇಗೆತಾನೇ ತಿರಸ್ಕರಿಸಲಾಪರು?

ರಾಜಂ—ಆದರೆ ಇಷ್ಟು ಹೊತ್ತಾದರೂ ಕುಸುಮಪುರದಲ್ಲಿ ಕೌಮುದೀ
ಮಹೋತ್ಸವವು ನಡೆಯದಿರಲು ಕಾರಣವೇನು? ನೋಡು.

ವೃ॥ ರತಿಚರಿತಪ್ರವೀಣವಿಟರೊಂದಿಗೆ ವೇಶಿಯರೇಕೆ ಬೀದಿ
ಯೊಳ್ । ವಿತತ ನಿತಂಬಭಾರದ ಲಸುತ್ತ್ವವೆ ಮೆಲ್ನಡೆಯಿಂ
ದೆ ಶೋಭಿಸರ್ ॥ ಅತಿಮುದದಿಂ ದಳುಂಕದೊಡೆಯುರ್ಗೆ
ವಿಸೋಪದ ಪಂತದಿಂ ವಧೂ । ತತಿಯೊಡಗೂಡುತುಂ
ವಿಹರಿಸ ರ್ವಿಭವಂಗಳೊಳೇಕೆ ಪೌರರುಂ ॥

ಕಂಚು—ಆಹುದು. ಹೀಗೆಯೇ

ರಾಜಂ—ಏನು ಆಹುದು?

ಕಂಚು—ಮಹಾರಾಜನೆ! ಇದು.

ರಾಜಂ—ಚೆನ್ನಾಗಿ ಹೇಳು.

ಕಂಚು—ಮಹಾರಾಜನೆ! ಕೌಮುದೀ ಮಹೋತ್ಸವವು ನಿಲ್ಲಿಸಲ್ಪಟ್ಟಿತು.

ರಾಜಂ—(ಕೋಪದಿಂದ) ಆಹ ಯಾರಿಂದ?

ಕಂ—ಮಹಾರಾಜನೆ! ಇನ್ನು ಮುಂದಕ್ಕೆ ವಿಜ್ಞಾಪಿಸಲು ಶಕ್ಯವಲ್ಲ.

ರಾಜಂ—ನೋಟಕರ ಕಣ್ಣುಗಳಿಗೆ ಅತಿರಮಣೀಯವಾದ ಈ ಮಹೋತ್ಸವ ವನ್ನು ಆರ್ಯಚಾಣಕ್ಯನು ನಿಲ್ಲಿಸಲಿಲ್ಲವಷ್ಟೆ?

ಕಂ—ಸ್ವಾಮಿಯೆ! ಬದುಕಲೆಳಸುವ ಮತ್ತಾವನು ತಾನೇ ಸ್ವಾಮಿಯಾಜ್ಞೆ ಯನ್ನು ಅತಿಕ್ರಮಿಸಬಲ್ಲನು?

ರಾಜಂ—ಶೋಣೋತ್ತರೆ! ಕುಳಿತುಕೊಳ್ಳಲಪೇಕ್ಷಿಸುವೆನು

ಪ್ರತೀಹಾರಿ—ಮಹಾರಾಜನೆ! ಇದೋ ಸಿಂಹಾಸನವು.

ರಾಜಂ—(ಕುಳಿತುಕೊಂಡಂತೆ ನಟಿಸಿ) ಆರ್ಯವೈಹೀನರೆ! ಆರ್ಯ ಚಾಣಕ್ಯನನ್ನು ನೋಡಲಪೇಕ್ಷಿಸುವೆನು.

ಕಂಚು—ಸ್ವಾಮಿಯಪ್ಪಣೆಯಂತೆ (ಎಂದು ಹೊರಟುಹೋಗುವನು).

(ಅನಂತರದಲ್ಲಿ ಚಾಣಕ್ಯನು ತನ್ನ ಮನೆಯಲ್ಲಿ ಪೀಠಗತನಾಗಿ ಕೋಪದಿಂದ ಕೂಡಿದ ಚಿಂತೆಯನ್ನು ನಟಿಸುತ್ತಾ ಪ್ರವೇಶಿಸುವನು.)

ಚಾಣ—ದುರಾತ್ಮನಾದ ರಾಕ್ಷಸನು ನನ್ನೊಡನೆ ಏಕೆ ಸೆಣಸುವನು?

ವೃ || ನಡೆದಪರಾಧದಿಂ ಫಣಿವೊಲಾಪುರಮಂ ಪೊರಮಟ್ಟು ನಂ
ದರಂ | ಮುಡುಹುತೆ ವಿಷ್ಣುಗುಪ್ತನವನೆಂತಿಳೆಯಂ ವೃಷ
ಲಂಗೆ ಕೊಟ್ಟನೊ || ಪಿಡಿದಪೆನಾನುಮಾತೆರದೆ ಮೌರ್ಯನ
ರಾಜ್ಯಮನೆಂದು ಯತ್ನಮಂ | ಪಡೆದಿವನೀಗಳೆನ್ನ ಮತಿ
ಯಂ ಗೆಲಲುಜ್ಜುಗಗೆಯ್ಯುತಿರ್ದಪಂ ||

(ಆಕಾಶದಲ್ಲಿ ಲಕ್ಷ್ಯವನ್ನಿಟ್ಟು) ರಾಕ್ಷಸ! ರಾಕ್ಷಸ! ಈ ದುರ್ವ್ಯಸನವನ್ನು ಬಿಡು.

ಕಂ || ದೊರೆತನವುಂ ದುಸ್ಸಚಿವರೊ |
ಳಿರಿಸಿದಖಳನಂದನಲ್ಲ ಮೌರ್ಯನಿವಂ ನೀಂ ||
ಪರಿಕಿಸೆ ಚಾಣಕ್ಯನುಮು |
ಲ್ಲಿರಲಿಂತೀವೈರಮೊಂದೆ ನಿನಗೆಣೆ ಯೆಮ್ಮೊಳ್ ||

(ಯೋಚಿಸಿ) ಅಥವಾ ಈ ವಿಷಯದಲ್ಲಿ ಬಹಳವಾಗಿ ಮನಸ್ಸನ್ನು ನೋಯಿಸತಕ್ಕದೂ ಅಲ್ಲ. ಏಕೆಂದರೆ —

ವೃ|| ಬಳಸಿರ್ಪ ಪರ್ವತೇಂದ್ರಾತ್ಮಜನೊಳ ಗೊಳಪೊಕ್ಕೆನ್ನ ಭೃತ್ಯರ್ಕಳೆಲ್ಲಂ | ತಳೆದಾಜ್ಞಾಯೋಗಮಂ ಸಾಧಿಸುತಿಹ ರೊಲವಿಂ ಗೂಢಸಿದ್ಧಾರ್ಥರಾದ್ಯರ್|ಗಳಿಸುತ್ತಂ ಮೌರ್ಯನೊಳ್ ಕೈತವದೆ ಕಲಹಮಂ ಭೇದವೈದುಷ್ಯದಿಂದೀ|ಗಳೆ ವೈರಂಗೊಂಡಮಾತ್ಯಂ ಪಗೆವನ ನುಳಿವೊಲ್ ಭೇದಿಪೆಂ ಬುದ್ಧಿಯಿಂದಾಂ ||

(ಕಂಚುಕಿಯು ಪ್ರವೇಶಿಸಿ) ಸೇವೆಯು ಕಷ್ಟವಲ್ಲವೆ?

ವೃ|| ಮೊದಲಧಿಪಂಗ ಮಾಬಳಿಕ ಮಂತ್ರಿಗಮಾನೃಪವಲ್ಲಭಂಗಮಾ | ಸದನದೊಳಾಣ್ಮನೊಲ್ಮೆವಡೆದಾ ನೆಲಸಿರ್ಪರೊಳವಿಟಾಳಿಗಂ | ಬೆದರುತೆ ದೈನ್ಯದಿಂ ಮೊಗಮನೋಡಿ ರಹಸ್ಯಮುನಾಚಿಡುತ್ತೆ ಪಿಂ|ಡದನೊಳವಜ್ಞೆಯಂಪಡೆದು ಸೇವಿಪುದಂ ತಿಳಿವರ್ ಶ್ವವೃತ್ತಿಯಂ ||

(ನಡೆದು ನೋಡಿ) ಇದೋ ಆರ್ಯಚಾಣಕ್ಯನ ಮನೆಯು ಒಳಪುಗುವೆನು. (ಒಳಪೊಕ್ಕು ನೋಡಿ) ಆಹಾ! ರಾಜಾಧಿರಾಜ ಮಂತ್ರಿಯ ಮನೆಯ ವೈಭವವನ್ನು ಏನು ಹೇಳಲಿ?

ಕಂ|| ಇದೊ! ಗೋಮಯಮೊಡೆಯುವ ಕ |
ಲ್ಲಿದೊ! ವಟುಗಳ್ ತಂದ ಕುಶಗಳಿದು ಮೊಣಗಿಸಲೊ||
ಡ್ಡಿದಸಮಿಧೆಯು ಭಾರದೆಬಾ |
ಗಿದಸೂರಿನ ಕುಸಿದಗೋಡೆ ಯುರೆಮನೆ ಕಾಣ್ಬುಂ ||

ಆದುದರಿಂದ ಈತನು ಚಂದ್ರಗುಪ್ತನನ್ನು ವೃಷಲನೆಂದು ಕರೆಯು ವುದು ಯುಕ್ತವೇ ಸರಿ. ಏಕೆಂದರೆ—

ವೃ || ಪುಸಿನುಡಿಯಾಡದಿರ್ಪ ರಸಿಕರ್ಕಳು ನೊಳ್ನುಡಿಗೊಂಡು
ದೈನ್ಯದಿಂ| ವಸುಮತಿಯಾಣ್ಮನಂ ಪೊಗಳ್ವರಿಲ್ಲದ ನ್ಯೈಮೆ
ಯ ತೋರಿ ಬಾಯ್ಬಳ || ಲ್ಪಸರಿಸುವನ್ನ ಮಾಸೆಯುಮ
ಹತ್ತುವಿದೆಲ್ಲ ಮದಿಲ್ಲದಿರ್ದೊಡೀ | ರಸೆಯರಸರ್ಕಳಾಸೆ
ಯುಳಿದರ್ಗೆ ತಿರಸ್ಕೃತರಲ್ತೆ ! ಪುಲ್ಲುಪೊಲ್ ||

(ನೋಡಿ ಭಯದಿಂದ) ಓಹೋ ! ಆರ್ಯಚಾಣಕ್ಯನಿಲ್ಲಿಯೇ ಇರುವನು. ಇವನಾದರೆ—

ಕಂ || ಅಲಗಳಿದು ಜಗವನೊರ್ಮೆ ವೃ |
ಷಲನಂದನೃಪರ್ಗೆ ನೀಡುತುದಯಾಸ್ತಗಳಂ ||
ಕೆಲವೆಡೆ ಕ್ರಮದೆ ಹಿನೋಷ್ಣವ |
ತೊಲಗಿಪ ರವಿರುಚಿಯ ನೈಜತೇಜದೆ ನಗುವಂ ||

(ಮೊಣಕಾಲುಗಳಿಂದ ಅಡ್ಡಬಿದ್ದು) ಆರ್ಯನಿಗೆ ಜಯವಾಗಲಿ.

ಚಾಣ—ವೈಹೀನರೆ! ಬಂದ ಕಾರ್ಯವೇನು ?

ಕಂಚು—ಆರ್ಯನೆ! ಪ್ರಣಾಮಸಂಭ್ರಮಾಗತ ರಾಜನ್ಯಮಂಡಲಕಿರೀಟತಟ ಘಟಿತಮಣಿಕಿರಣ ಮಂಜರೀ ಪುಂಜಪಿಂಜರೀಭೂತ ಚರಣಯುಗಳನು, ಸುಗೃಹೀತನಾಮಧೇಯನೂ ಆದ ಚಂದ್ರಗುಪ್ತಮಹಾರಾಜನು ದಂಡ ಪ್ರಣಾಮಂಗೆಯ್ದು “ಕಾರ್ಯಾತಿಪಾತವಿಲ್ಲದಿದ್ದರೆ ಆರ್ಯನನ್ನು ನೋಡ ಲಪೇಕ್ಷಿಸುವೆನು” ಎಂದು ಬದ್ಧಾಂಜಲಿಯಾಗಿ ಬೇಡಿಕೊಳ್ಳುವನು.

ಚಾಣ—ವೃಷಲನು ನನ್ನನ್ನು ನೋಡಲಪೇಕ್ಷಿಸುವನೆ? ವೈಹೀನರೆ! ನಾನು ಕೌಮುದೀಮಹೋತ್ಸವವನ್ನು ನಿಲ್ಲಿಸಿದುದು ವೃಷಲನ ಕಿವಿಗೆ ಬೀಳಲಿಲ್ಲ ವಷ್ಟೆ.

ಕಂಚು—ಆರ್ಯನೆ! ಅಹುದು,

ಚಾಣ—(ಕೋಪದಿಂದ) ಆಹ! ಹೇಳಿದವರು ಯಾರು?

ಕಂಚು—(ಭಯದಿಂದ) ಆರ್ಯನು ಪ್ರಸನ್ನನಾಗಬೇಕು. ಸ್ವಾಮಿಯು ತಾನೇ ಸುಗಾಂಗಪ್ರಾಸಾದವನ್ನೇರಿ ಕೌಮುದೀಮಹೋತ್ಸವವು ನಡೆಯದಿರುವ ಕುಸುಮಪುರವನ್ನು ಕಂಡನು

ಚಾಣ—ಆಹಾ! ತಿಳಿಯಿತು. ನೀವುಗಳು ಪ್ರೋತ್ಸಾಹಿಸದೇ ವೃಷಲನು ಕೋಪಗೊಂಡಿರುವನೆ? ಇನ್ನೇನು?

ಕಂಚು—(ಭಯವನ್ನು ನಟಿಸುತ್ತಾ ಸುಮ್ಮನೆ ತಲೆಯನ್ನು ಬಾಗಿಸಿಕೊಂಡು ನಿಲ್ಲುವನು)

ಚಾಣ—(ಸ್ವಗತಂ)ಆಹಾ! ರಾಜಪರಿಜನಕ್ಕೆ ಚಾಣಾಕ್ಯನಮೇಲೆಷ್ಟುದ್ವೇಷವು? (ಪ್ರಕಾಶಂ) ಆದರೆ ವೃಷಲನೆಲ್ಲಿರುವನು?

ಕಂಚು--(ಭಯವನ್ನು ನಟಿಸುತ್ತಾ) ಆರ್ಯನೆ! ಮಹಾರಾಜನು ಸುಗಾಂಗವನ್ನೇರಿ ನನ್ನನ್ನು ಆರ್ಯನ ಪಾದಗಳ ಬಳಿಗೆ ಕಳುಹಿದನು.

ಚಾಣ—(ಎದ್ದು) ಸುಗಾಂಗದ ದಾರಿಯನ್ನು ತೋರಿಸು

ಕಂಚು—ಇದೊ! ಸುಗಾಂಗಪ್ರಾಸಾದವು. ಆರ್ಯನು ಮೆಲ್ಲಗೆ ಹತ್ತಬೇಕು.

ಚಾಣ—(ಹತ್ತಿನೋಡಿದಂತೆ ನಟಿಸಿ) ಆಹಾ! ವೃಷಲನು ಸಿಹ್ಮಾಸನದಲ್ಲಿ ಕುಳಿತಿರುವನು. ಭಾಪು! ಭಾಪು!

ವೃ॥ ಧರಣಿಯೊಳೇಕವೀರರಹ ನಂದರಗಲ್ದ ಮೃಗೇಂದ್ರಪೀಠ
ದೊಳ್। ನರಪತಿವಸಾಳಿವಮೌರ್ಯ ವೃಷಲಂ ನೆಲಸಿರ್ಪುದ
ನೀಗಳೀಕ್ಷಿಸಲ್। ಭರದನುರೂಪಭೂಪನೊಳೆ ಸಂಗತವಾ
ದುದು ಸಿಂಹಪೀಠಮೆಂ। ದರಿತೆನತೊಳ್ಗುಣಾಗಳಿವಮುರ್ಬು
ತೆ ಪೆರ್ಚಿಪುದೆನ್ನ ನಲ್ಮೆಯುಂ

(ಪ್ರಕಾಶಂ ಒಳಗೆ ಹೋಗಿ) ವೃಷಲನಿಗೆ ಜಯವಾಗಲಿ.

ರಾಜಂ—(ಸಿಂಹಾಸನದಿಂದೆದ್ದು) ಆರ್ಯನೆ! ಚಂದ್ರಗುಪ್ತನು ವಂದಿಸುವನು. (ಎಂದು ಕಾಲುಮೇಲೆ ಬೀಳುವನು)

ಚಾಣ—(ಕೈಹಿಡಿದು) ಮಗು! ಏಳು ಏಳು

ಶಿಲೆಗಳಮಧ್ಯದೊಳ್ ಪರಿವ ಬಾಂಬೊಳೆತಣ್ಪಿನ ಶೀತಶೈಲದಿಂ। ಪೊಳೆವ ವಿಚಿತ್ರವರ್ಣಮಣಿ ರೋಚಿಯ ದಕ್ಷಿಣಸಾಗರಂಬರಂ ॥ ಅಳುಕುತೆ ಬಂದುಬಂದೆರಗಿ ಬೀಳ್ವ ನೃಪಾಲರ ಮೌಳಿರತ್ನಮಂ। ಡಳರುಚಿಯಿಂ ಬೆಳಂಗುತಿರ ಲಿಂತುಟೆ ನಿನ್ನ ಪದಂಗಳಾವಗಂ ॥

ರಾಜಂ—ಆರ್ಯನನುಗ್ರಹದಿಂದೆಲ್ಲವನ್ನೂ ಅನುಭವಿಸುತ್ತಲೇ ಇರುವೆನು. ಆದುದರಿಂದ ಆರ್ಯನ ಕುಳಿತುಕೊಳ್ಳಬೇಕು.

(ಇಬ್ಬರೂ ಯಥೋಚಿತವಾಗಿ ಕುಳಿತುಕೊಳ್ಳುವರು)

ಚಾಣ—ವೃಷಲನೆ! ನಮ್ಮನ್ನು ಕರೆಯಿಸಿದುದೇಕೆ?

ರಾಜಂ—ಆರ್ಯನ ದರ್ಶನದಿಂದ ಅನುಗ್ರಹವನ್ನು ಪಡೆಯುವುದಕ್ಕೆ.

ಚಾಣ—(ಮುಗುಳ್ನಗೆಯಿಂದ) ಈ ವಿನಯವಂತಿರಲಿ. ಪ್ರಭುಗಳು ಪ್ರಯೋಜನವಿಲ್ಲದೆ ಅಧಿಕಾರಿಗಳನ್ನು ಕರೆಯಿಸುವುದಿಲ್ಲ.

ರಾಜಂ—ಆರ್ಯನೆ! ಯಾವಪ್ರಯೋಜನವನ್ನುದ್ದೇಶಿಸಿ ಆರ್ಯನಿಂದ ಕೌಮುದೀ ಮಹೋತ್ಸವವು ನಿಲ್ಲಿಸಲ್ಪಟ್ಟಿತು?

ಚಾಣ—(ನಕ್ಕು) ಆದರೆ ನಮ್ಮನ್ನು ಕರೆಯಿಸಿದುದು ಹಳಿಯುವುದಕ್ಕೊ?

ರಾಜಂ—(ಶಿವ ಶಿವ) ಅಲ್ಲಅಲ್ಲ. ವಿಜ್ಞಾಪಿಸುವುದಕ್ಕೆ.

ಚಾಣ—ಹೀಗೆ ವಿಜ್ಞಾಪನೀಯರಾದರೆ ಶಿಷ್ಯನಾದವನು ಸ್ವತಂತ್ರರಾದ ಗುರುಗಳನ್ನು ನಿರೋಧಿಸಬಾರದು.

ರಾಜಂ—ಹಾಗೆಯೇ ಸರಿ. ಸಂಶಯವೇನು? ಆದರೆ ಆರ್ಯನು ಯಾವಾಗಲೂ ನಿಷ್ಪ್ರಯೋಜನವಾಗಿ ಪ್ರವರ್ತಿಸುವುದಿಲ್ಲವೆಂಬುದರಿಂದ ನಮ್ಮ ಪ್ರಶ್ನೆಗೆ ಅವಕಾಶವಾಯಿತು.

ಚಾಣ—(ನಕ್ಕು) ವೃಷಲನೆ! ಚೆನ್ನಾಗಿ ತಿಳಿದಿರುವೆ! ಪ್ರಯೋಜನವಿಲ್ಲದೆ ಚಾಣಕ್ಯನು ನಿದ್ರೆಯಲ್ಲಿಯೂ ಹೊರಳುವುದಿಲ್ಲವೊ?

ರಾಜಂ—ಆರ್ಯನೆ! ಆದುದರಿಂದಲೇ ಕೇಳಬೇಕೆಂಬ ಕುತೂಹಲವು ನನ್ನನ್ನು ಮಾತನಾಡಗೊಳಿಸುವುದು.

ಚಾಣ—ವೃಷಲನೆ! ಕೇಳು–ಇಲ್ಲಿ ಅರ್ಥಶಾಸ್ತ್ರಕಾರರು ಕಾರ್ಯಸಿದ್ಧಿಯನ್ನು ರಾಜಾಯತ್ತವೆಂದೂ, ಸಚಿವಾಯತ್ತವೆಂದೂ, ಉಭಯಾಯತ್ತವೆಂದೂ ಮೂರುವಿಧವಾಗಿ ಹೇಳುವರು ಆದುದರಿಂದ ನಾವೇ ಈ ವಿಷಯದಲ್ಲಿ ನಿಯುಕ್ತರಾಗಿ ಎಲ್ಲವನ್ನೂ ನೋಡಿಕೊಳ್ಳುತ್ತಿರುವುದರಿಂದ ಸಚಿವಾಯತ್ತಸಿದ್ಧಿಯಾದ ನೀನು ಪ್ರಯೋಜನವನ್ನೇಕೆ ತಿಳಿಯಬೇಕು.

ರಾಜಂ—(ಕೋಪದಿಂದ ಮುಖವನ್ನು ತಿರುಗಿಸಿಕೊಳ್ಳುವನು)

(ತೆರೆಯಲ್ಲಿ ವೈತಾಳಿಕರು ಹೊಗಳುವರು)

೧ ನೆ ಯುವನು—

ವೃ|| ಕಾಶಮುಯೂಖಮಂ ಪಳಿವಭಸ್ಮದೆ ಚರ್ಾಬಿಳದಾಗಿ
ಸುತ್ತೆ, ರಾ| ತ್ರೀಶಕರಂಗಳಿಂ ಮುಗಿಲಪ್ಪೋಲ್ವ ಗಜಾ
ಜಿನಮಂ ಬೆಳಂಗಿಸು || ತ್ತಾತಶಿರೋಚಿಯಂ ತಳೆದು
ರುಂಡಸರಂಬೊಲೆ ಹಂಸಹಾಸವಾಂ| ತೀಶತನೂಪಮಂ
ಶರದ ಮಾರ್ಚುಗೆ ನಿಮ್ಮ ಭಿಯೋಗದುಃಖಮಂ ||

ಮತ್ತಂ ವೃ || ಭರದಿಂದಾಗರಳ್ದ ಕಣ್ಣೆನೆಗಳಂ ಮುಚ್ಚುತ್ತೆ,
ರತ್ನಪ್ರದೀ| ಪ ರುಚಿಪ್ರೇಕ್ಷಣಕಳ್ಕುತಾಗುಳಿಕೆಯಿಂ ನೀ
ರುಣ್ಮೆ ಬಲ್ನಿದ್ದೆ ಪ| ರ್ಬಿರೆ ಮೈವಿರ್ಚಿ ಘಣೋಪಧಾನ
ದಹಿತಲ್ಪಪ್ರಾಂತದಿಂದೇಳ್ವ ಶ್ರೀ | ಧರನಾಕೇಕರವೀಕ್ಷಣಂ
ಪೊರೆಗೆ ನಿಮ್ಮಂ ನಲ್ಮೆಯಿಂದಾವಗಂ ||

೨ ನೆ ಯುವನು—

ವೃ || ಕಲಿತನಕಾಕರಂಗಳಿನೆ ಮತ್ತಮತಂಗಜದರ್ಪಮಂ
ಪಳಂ| ಚಲೆನ ಮಹಾತ್ಮರಂ ವಿಧಿಯುದೇತಕೊ ನಿರ್ಮಿಸಿ
ದಂ ಕೆಲಂಬರಂ|| ಮಲೆತ ಮೃಗೇಂದ್ರನಂತೆ ಕಿಳೆ ದಾಡೆಯು
ನಾಜ್ಞೆ ಕಿಡಲ್ ಮಹೀಂದ್ರ! ಭೂ| ತಲಕಧಿರಾಜರೆಂದೆನಿಪ
ನಿನ್ನವೊಲುನ್ನತರೆಂತು ಸೈರಿಪರ್ ||

ಮತ್ತಂ —

ಕಂ ॥ ತಿರೆಯುರಸ ನೆನಿಸ ನಾತಂ ।
ತರತರ ಸಿಂಗರವನಾಂತು ವಿಭವಂಬಡುವಂ ॥
ಒರೆದಾಜ್ಞೆಯು ನೆಲ್ಲರು ಮಾ ।
ದರಿಪಂತೆ ಮೊಲಾಳ್ದು ನಿನ್ನ ಪೋಲ್ವನೆ ದೊರೆಯ್ಯೆ ॥

ಚಾಣ—(ಸ್ವಗತಂ) ಮೊದಲನೆಯುದಾದರೆ ವಿಶಿಷ್ಟದೇವತಾಸ್ತುತಿರೂಪದಿಂದ ಪ್ರಸಕ್ತವಾದ ಶರದೃತುವಿನ ಗುಣಗಳನ್ನು ವರ್ಣಿಸುವ ಆಶೀರ್ವಾದ ವಾಯಿತು. ಮತ್ತೊಂದಿದೇನೋ ತಿಳಿಯುಲಿಲ್ಲ; (ಯೋಚಿಸಿ) ಆಹ! ತಿಳಿಯಿತು. ಇದು ರಾಕ್ಷಸನ ತಂತ್ರವು. ದುರಾತ್ಮನಾದ ರಾಕ್ಷಸನೆ! ಕಾಣಬರುವೆಯಾ. ಅಯ್ಯಾ! ಚಾಣಕ್ಯನು ಎಚ್ಚರವಾಗಿಯೇ ಇರುವನಷ್ಟೆ!

ರಾಜಂ—ಆರ್ಯ! ವೈಹೀನರೆ! ಈ ವೈತಾಳಿಕರಿಗೆ ಲಕ್ಷಧನವನ್ನು ಕೊಡಿಸು.

ಕಂ—ಸ್ವಾಮಿಯಾಜ್ಞೆಯಂತಾಗಲಿ (ಎಂದು ಹೊರಡುವನು)

ಚಾಣ—(ಕೋಪದಿಂದ) ವೈಹೀನರೆ! ನಿಲ್ಲು. ಹೋಗಬೇಡ. ವೃಷಲನೆ! ಅಸ್ಥಾನದಲ್ಲಿ ಇಷ್ಟು ಹಣವನ್ನು ವೆಚ್ಚಮಾಡುವದೇಕೆ?

ರಾಜಂ—(ಕೋಪದಿಂದ) ಆರ್ಯನು ಹೀಗೆ ಎಲ್ಲವಿಷಯುಗಳಲ್ಲಿಯೂ ನನ್ನನ್ನು ಕೈಬಾಜಾಡದಂತೆ ನಿರ್ಬಂಧಗೊಳಿಸಿದರೆ ರಾಜ್ಯವು ನನಗೆ ಬಂಧನದಂತಲ್ಲದೆ ರಾಜ್ಯದಂತಲ್ಲ.

ಚಾಣ—ವೃಷಲನೆ! ಸ್ವತಂತ್ರರಲ್ಲದ ರಾಜರಿಗೆ ಇಂತಹ ದೋಷಗಳು ಸಂಭವಿಸುವವು. ಇದನ್ನು ನೀನು ಸಹಿಸದಿದ್ದರೆ ನೀನೇ ಸ್ವತಂತ್ರನಾಗು.

ರಾಜಂ—ಇದೋ! ನಮ್ಮ ಕೆಲಸದಲ್ಲಿ ನಾವು ಸ್ವತಂತ್ರರಾಗುವೆವು

ಚಾಣ—ನಮಗೆ ಸಂತೋಷವಾಯಿತು. ನಾವೂ ನಮ್ಮ ಕೆಲಸದಲ್ಲಿ ಸ್ವತಂತ್ರರಾಗುವೆವು.

ರಾಜಂ – ಹೀಗಾದರೆ "ಕೌಮುದೀ ಮಹೋತ್ಸವವನ್ನು ನಿಲ್ಲಿಸಲು ಕಾರಣ ವೇನು" ಎಂಬುದನ್ನು ಕೇಳಲಪೇಕ್ಷಿಸುವೆನು

ಚಾಣ – ವೃಷಲನೆ! ಕೌಮುದೀ ಮಹೋತ್ಸವವನ್ನು ನಡೆಯಿಸುವುದರಿಂದ ಪ್ರಯೋಜನವೇನು? ಎಂದು ನಾನೂ ಕೇಳಲಪೇಕಿಸುವೆನು.

ರಾಜಂ – ಮೊದಲನೆಯದು ನನ್ನ ಆಜ್ಞಾಭಂಗವೇ?

ಚಾಣ – ವೃಷಲನೆ! ನನಗೂ ನಿನ್ನ ಆಜ್ಞಾಭಂಗವೇ ಕೌಮುದೀ ಮಹೋತ್ಸವವನ್ನು ನಿಲ್ಲಿಸುದುದಕ್ಕೆ ಪ್ರಥಮ ಪ್ರಯೋಜನವು ಏಕೆಂದರೆ—

ವೃ|| ಪೊಳೆವ ತಮಾಲಕಂಪಳದೆ ಕರ್ವೊಗೆರಾಂತ ತಟೀವನಾಳಿ| ಯುಚ್ಚಲಿತ ತಿಮಿಂಗಿಳಾಳಿ ಕದಡಿರ್ಪ ಪಯೋಧಿಚತು ಷ್ಟಯುಂಬರಂ|| ಬಳಲದ ಪುಷ್ಪಮಾಲೆವೊಲಧೀಶರ ಮೌ ಳಿಯೊಳಾಳುವಾಜ್ಞೆಯಿ | ನ್ನೊಳೆ ಜಗುಳ್ದೀಗ ಪೇಳ್ದಪುದು ನಿನ್ನ ವಿಭುತ್ವವಿನೀತಭಾವಮಂ ||

ಇದಲ್ಲದೆ ಮತ್ತೊಂದು ಪ್ರಯೋಜನವನ್ನು ಕೇಳಲಪೇಕ್ಷಿಸೆದರೆ ಅದನ್ನೂ ಹೇಳುವೆನು.

ರಾಜಂ – ಹೇಳೋಣವಾಗಲಿ.

ಚಾಣ – ಶೋಣೋತ್ತರೆ! ಅಸಮಾಧಾನಗೊಂಡು ಇಲ್ಲಿಂದ ಹೊರಟುಹೋಗಿ ಮಲಯಕೇತುವನ್ನಾಶ್ರಯಿಸಿರುವ ಭದ್ರಭಟಾದಿಗಳು ಬರೆದ ಕಾಗದ ವನ್ನು ಕೊಡುವಂತೆ ನಾನು ಹೇಳಿದೆನೆಂದು ಕಾಯಸ್ಥನಾದ ಅಚಲನಿಗೆ ಹೇಳು.

ಪ್ರತಿಹಾರಿ – ಆರ್ಯನ ಅಪ್ಪಣೆಯಂತಾಗಲಿ. (ಹೋಗಿ ತಿರುಗಿ ಬಂದು) ಆರ್ಯನೆ! ಇದೊ ಪತ್ರಿಕೆಯು.

ಚಾಣ – ವೃಷಲನೆ! ಇದನ್ನು ನೋಡು.

ರಾಜಂ – (ತನ್ನಲ್ಲಿಯೇ ಓದಿಕೊಳ್ಳುವನು)

ಸ್ವಸ್ತಿ—ಪ್ರಖ್ಯಾತನಾಮಧೇಯನೂ ಸ್ವಾಮಿಯೂ ಆದ ಚಂದ್ರಗುಪ್ತನೊಡನೆ ಅಭಿವೃದ್ಧಿಯನ್ನು ಪಡೆದು, ಇಲ್ಲಿಂದ ಹೊರಟು ವಧ್ಯನಾದ ಮಲಯಕೇತುವನ್ನು ಆಶ್ರಯಿಸಿರುವ ಪ್ರಧಾನಪುರುಷರ ಪ್ರಮಾಣ ಪತ್ರಿಕೆಯೆಂತೆಂದರೆ–

"ಗಜಾಧ್ಯಕ್ಷನಾದ ಭದ್ರಭಟನು, ಅಶ್ವಾಧ್ಯಕ್ಷನಾದ ಪುರುಷದತ್ತನು, ಮಹಾಪ್ರತೀಹಾರನಾದ ಚಂದ್ರಭಾನುವಿಗೆ ಸೋದರಳಿಯನೆನಿಸಿದ ಡಿಂಗಿರಾತನು, ಸ್ವಾಮಿಗೆ ಸಂಬಂಧಿಯು, ಮಹಾರಾಜನೂ ಆದ ಬಲದೇವಗುಪ್ತನು, ಬಾಲ್ಯದಿಂದಲೂ ಸ್ವಾಮಿಯನ್ನೇ ಸೇವಿಸುತ್ತಿದ್ದ ರಾಜಸೇನನು, ಸೇನಾಪತಿಯಾದ ಸಿಹ್ಮಬಲನ ತಮ್ಮ ಭಾಗುರಾಯಣನು, ಮಾಲವರಾಜಪುತ್ರನಾದಲೋಹಿತಾಕ್ಷನು,ಅರಸುಮಕ್ಕಳಲ್ಲಿ ಮುಖಂಡನಾದ ವಿಜಯವರ್ಮನು, ಈ ನಾವು ಸ್ವಾಮಿಯ ಕಾರ್ಯದಲ್ಲಿ ಜಾಗರೂಕರಾಗಿರುವೆವು" ಎಂದು.

(ಪ್ರಕಾಶಂ) ಆರ್ಯನೆ! ಈ ಪತ್ರವಿಷ್ಟು, ಆದರೆ ಇವರ ಅಸಮಾಧಾನಕಾರಣಗಳನ್ನು ತಿಳಿಯಲಪೇಕ್ಷಿಸುವೆನು.

ಚಾಣ—ವೃಷಲನೆ! ಕೇಳು—ಇವರಲ್ಲಿ ಅಶ್ವಾಧ್ಯಕ್ಷ ಗಜಾಧ್ಯಕ್ಷರಾದ ಭದ್ರಭಟಪುರುಷದತ್ತರುಂಟಲ್ಲಾ! ಅವರು ಸ್ತ್ರೀಮದ್ಯಮೃಗಯಾಶೀಲರಾಗಿ ತಮ್ಮ ತಮ್ಮ ಹಸ್ತ್ಯಶ್ವಸೇನಾವಿಚಾರದಲ್ಲಿ ಉದಾಸೀನರಾದುದರಿಂದ ನಾನು ಅವರನ್ನು ಅಧಿಕಾರಗಳಿಂದ ತಪ್ಪಿಸಿ ಜೀವನಮಾತ್ರದಲ್ಲಿ ಇರಿಸಿದೆನೆಂದು ಅವರು ಶತ್ರುಪಕ್ಷದಲ್ಲಿ ತಮ್ಮ ತಮ್ಮ ಅಧಿಕಾರಗಳನ್ನು ಪಡೆದು ಮಲಯಕೇತುವನ್ನು ಆಶ್ರಯಿಸಿದರು.

ಆ ಡಿಂಗಿರಾತಬಲಗುಪ್ತರುಂಟಷ್ಟೆ! ಅವರು ದುರಾಶೆಗೊಳಗಾಗಿ ನೀನಿತ್ತ ಜೀವನದಿಂದ ತೃಪ್ತರಾಗದೆ ಅಲ್ಲಿ ಅಧಿಕವಾಗಿ ದೊರೆಯುವುದೆಂದು ಹೋಗಿ ಮಲಯಕೇತುವನ್ನು ಆಶ್ರಯಿಸಿದರು.

ನಿನ್ನನ್ನು ಬಾಲ್ಯದಿಂದಲೂ ಸೇವಿಸುತ್ತಿದ್ದ ರಾಜಸೇನನೆಂಬವನಾವನುಂಟೊ, ಅವನು ನಿನ್ನ ಅನುಗ್ರಹದಿಂದ ಅತಿಶೀಘ್ರದಲ್ಲಿಯೇ ಕೋಶಹಸ್ತ್ಯಶ್ವಾದಿ ಮಹೈಶ್ವರ್ಯವನ್ನು ಪಡೆದು, ಅದು ನಷ್ಟವಾದೀತೆಂಬ ಭಯದಿಂದೋಡಿ ಹೋಗಿ ಮಲಯಕೇತುವನ್ನು ಮರೆಹೊಕ್ಕನು.

ಆ ಮತ್ತೊಬ್ಬ ಸಿಹ್ಮಬಲನ ತಮ್ಮನಾದ ಭಾಗುರಾಯಣನುಂಟಲ್ಲಾ! ಅವನೂ ಆ ಕಾಲದಲ್ಲಿಯೇ ಪರ್ವತೇಶ್ವರನೊಡನೆ ಸ್ನೇಹವನ್ನು ಬೆಳಸಿ ಆ ಸ್ನೇಹದಿಂದ "ಚಾಣಕ್ಯನು ನಿನ್ನ ತಂದೆಯನ್ನು ಕೊಲ್ಲಿಸಿದನು" ಎಂದು ಹುಟ್ಟುಗಟ್ಟಿ ರಹಸ್ಯವಾಗಿ ಹೆದರಿಸಿ ಮಲಯಕೇತುವನ್ನೋಡಿಸಿದನು. ತರುವಾಯ ನಿನಗೆ ವಿರೋಧಿಗಳಾದ ಚಂದನದಾಸಾದಿಗಳನ್ನು ನಿಗ್ರಹಿಸಲು ತನ್ನ ದೋಷದ ಶಂಕೆಯಿಂದೋಡಿಹೋಗಿ ಮಲಯಕೇತುವನ್ನು ಮರೆಬಿದ್ದನು. ಅವನೂ "ಈತನು ತನಗೆ ಪ್ರಾಣರಕ್ಷಕನು" ಎಂಬ ಕೃತಜ್ಞತೆಯಿಂದ ಅವನನ್ನು ತನ್ನ ಎರಡನೆಯ ಮಂತ್ರಿಯನ್ನಾಗಿ ನಿಯಮಿಸಿಕೊಂಡನು.

ಆ ಲೋಹಿತಾಕ್ಷ ವಿಜಯವರ್ಮರೆಂಬವರು ದುರಹಂಕಾರಿಗಳಾದುದರಿಂದ ತಮ್ಮ ಬಂಧುಗಳಿಗೆ ನೀನಿತ್ತ ಬಹುಮಾನವನ್ನು ಸೈರಿಸಲಾರದೆ ಮಲಯಕೇತುವನ್ನು ಆಶ್ರಯಿಸಿದರು.

ಇವೇ ಅವರ ಅಸಮಾಧಾನ ಕಾರಣಗಳು

ರಾಜಂ—ಹೀಗೆ ಅವರ ಅಸಮಾಧಾನಕಾರಣಗಳನ್ನು ತಿಳಿದಿದ್ದರೂ ಕ್ಷಿಪ್ರದಲ್ಲಿಯೇ ಆರ್ಯನು ಏಕೆ ಪ್ರತೀಕಾರವನ್ನು ಮಾಡಲಿಲ್ಲ?

ಚಾಣ—ವೃಷಲನೆ! ಪ್ರತೀಕಾರಮಾಡಲು ಆಗಲಿಲ್ಲ.

ರಾಜಂ—ಅಚಾತುರ್ಯದಿಂದಲೋ? ಅಥವಾ ಪ್ರಯೋಜನಾಪೇಕ್ಷೆಯಿಂದಲೊ?

ಚಾಣ—ಅಚಾತುರ್ಯವೆಂದರೇನು? ಪ್ರಯೋಜನಾಪೇಕ್ಷೆಯಿಂದಲೇ.

ರಾಜಂ—ಪ್ರಯೋಜನವನ್ನು ಈಗ ಕೇಳಲಪೇಕ್ಷಿಸುವೆನು.

ಚಾಣ—ಕೇಳಬಹುದು. ತಿಳಿದುಕೊಳ್ಳಲೂಬಹುದು. ಇಲ್ಲಿ ವಿರಕ್ತರಾದ ಪ್ರಜೆಗಳಿಗೆ ಅನುಗ್ರಹವೆಂದೂ, ನಿಗ್ರಹವೆಂದೂ, ಪ್ರತೀಕಾರವು ಎರಡು ವಿಧವಾಗಿರುವುದು. ಅಧಿಕಾರದಿಂದ ತೆಗೆಯಲ್ಪಟ್ಟ ಭದ್ರಭಟ ಪುರುಷ ದತ್ತರಿಗೆ ಅನುಗ್ರಹವೆಂಬುದು ಮರಳಿ ಅಧಿಕಾರವನ್ನು ಕೊಡುವುದೇ. ದುರ್ವ್ಯಸನಗಳಿಂದ ಸ್ವಾಧಿಕಾರಗಳಲ್ಲಿ ಉದಾಸೀನರಾದ ಅವರಿಗೆ ಮರಳಿ ಅಧಿಕಾರವನ್ನು ಕೊಟ್ಟರೆ ರಾಜ್ಯಕ್ಕೆ ಮೂಲಭೂತವಾದ ಹಸ್ತ್ಯಶ್ವಾದಿ ಸಕಲ ಸೈನ್ಯವೂ ಹಾಳಾದೀತು. ಸಕಲ ರಾಜ್ಯವನ್ನಿತ್ತರೂ ತೃಪ್ತ ರಾಗದ ಅತಿಲುಬ್ಧರಾದ ಡಿಂಗಿರಾತಬಲಗುಪ್ತರನ್ನು ಅನುಗ್ರಹಿಸುವುದು ಹೇಗೆ? ಧನನಾಶದಿಂದ ಭೀತರಾದ ರಾಜಸೇನ ಭಾಗುರಾಯಣರನ್ನು ಅನುಗ್ರಹಿಸುವುದಕ್ಕೆ ಅವಕಾಶವೆತ್ತಣದು? ಬಂಧುಗಳ ಬಹುಮತಿ ಯನ್ನು ಸೈರಿಸದ ದುರಹಂಕಾರಿಗಳಾದ ಲೋಹಿತಾಕ್ಷ ವಿಜಯವರ್ಮ ರನ್ನು ಯಾವ ಅನುಗ್ರಹವು ಪ್ರೀತಿಗೊಳಿಸೀತು? ಇದರಿಂದ ಅನುಗ್ರಹ ಪಕ್ಷವು ಪರಿಹೃತವಾಯಿತು.

ನಾವು ಈಗತಾನೇ ನಂದೈಶ್ವರ್ಯವನ್ನು ಆಕ್ರಮಿಸಿ ಆ ನಂದಸಹೋತ್ಥಾಯಿ ಗಳಾದ ಪ್ರಧಾನಪುರುಷರನ್ನು ಕ್ರೂರ ದಂಡನೆಗಳಿಂದ ಪೀಡಿಸಿದಲ್ಲಿ, ನಂದ ಕುಲಾನುರಕ್ತರಾದ ಪ್ರಜೆಗಳಿಗೆ ಅಪ್ರಿಯರೇ ಆಗುವೆವು? ಇದರಿಂದ ಎರಡನೆಯ ನಿಗ್ರಹಪಕ್ಷವೂ ಪರಿಹೃತವಾಯಿತು, ಹೀಗೆ ನಮ್ಮ ಕಡೆಯವ ರನ್ನು ಸೇರಿಸಿಕೊಂಡು ರಾಕ್ಷಸನ ಮಾತಿನಂತೆ ನಡೆಯುತ್ತಾ, ವಿಸ್ತಾರ ವಾದ ಮ್ಲೇಚ್ಛಬಲದಿಂದೊಡಗೂಡಿ ಪರ್ವತಪುತ್ರನಾದ ಮಲಯಕೇತುವು ಪಿತೃವಧಾಮರ್ಷಿಯಾಗಿ ನಮ್ಮನ್ನು ಮುತ್ತುವುದಕ್ಕೆ ಉದ್ಯುಕ್ತನಾಗಿರು ವನು. ಇದು ಯುದ್ಧಕಾಲವು, ಉತ್ಸವಕಾಲವಲ್ಲ, ಆದಕಾರಣ ಕೋಟೆಕೊತ್ತಳಗಳನ್ನು ಭದ್ರಪಡಿಸಬೇಕಾಗಿರುವಲ್ಲಿ ಕೌಮುದೀಮಹೋ ತ್ಸವದಿಂದೇನು? ಎಂದು ನಿಲ್ಲಿಸಿದೆನು.

ರಾಜಂ—ಆರ್ಯನೆ! ಇಲ್ಲಿ ಬಹಳ ಕೇಳತಕ್ಕದಿರುವುದು.

ಚಾಣ—ವೃಷಲನೆ! ಧಾರಾಳವಾಗಿಕೇಳು. ನನಗೂ ಇಲ್ಲಿ ಬಹಳ ಹೇಳತಕ್ಕು ದಿರುವುದು

ರಾಜಂ—ಇಷ್ಟು ಅನರ್ಥಗಳಿಗೂ ಹೇತುವಾದ ಆ ಮಲಯಕೇತುವು ಓಡಿ ಹೋಗುವಾಗ ಉಪೇಕ್ಷಿಸಿದುದು ಏಕೆ ?

ಚಾಣ—ವೃಷಲನೆ! ಉಪೇಕ್ಷಿಸಿದುದಕ್ಕೆ ಎರಡು ಕಾರಣಗಳುಂಟು. ನಿಗ್ರಹಿಸಬೇಕೆ? ಅಥವಾ ವಾಗ್ದಾನದಂತೆ ರಾಜ್ಯಾರ್ಧವನ್ನು ಕೊಡಬೇಕೆ? ನಿಗ್ರಹಿಸಿದಲ್ಲಿ "ಪರ್ವತೇಶ್ವರನನ್ನು ನಾವೇ ಕೊಲ್ಲಿಸಿದೆವು" ಎಂಬ ಕೃತಘ್ನತೆಗೆ ಕೈಯೊಡ್ಡಿದಂತಾಗುವುದು ಪ್ರತಿಜ್ಞೆಯಂತೆ ರಾಜ್ಯಾರ್ಧವನ್ನಿತ್ತರೂ ಪರ್ವತನಾಶಕ್ಕೆ ಕೃತಘ್ನತೆಮಾತ್ರವೇ ಫಲವಾಗುವುದು. ಈ ಕಾರಣದಿಂದ ಮಲಯಕೇತುವು ಓಡಿಹೋಗುವಾಗ ಉಪೇಕ್ಷಿಸಿದೆವು.

ರಾಜಂ—ಈ ವಿಷಯದಲ್ಲಿ ಹೀಗೆಯೊ? ಆ ರಾಕ್ಷಸನು ಇಲ್ಲಿಯೇ ಇರುವಾಗ ಆರ್ಯನುಪೇಕ್ಷಿಸಿದನೆಂಬುದಕ್ಕೆ ಆರ್ಯನುತ್ತರವೇನು ?

ಚಾಣ—ಆ ರಾಕ್ಷಸನೂ ಸ್ವಾಮಿಯಲ್ಲಿ ದೃಢಾನುರಾಗಿಯು, ಬಹುಕಾಲದಿಂದ ಒಂದೇಕಡೆಯಲ್ಲಿ ನೆಲಸಿರುವುದರಿಂದ ಶೀಲವನ್ನು ತಿಳಿದ ನಂದಾನುರಕ್ತರಾದ ಪ್ರಜೆಗಳಿಗೆ ಅತ್ಯಂತ ವಿಶ್ವಾಸಪಾತ್ರನು, ಪ್ರಜ್ಞಾಪೌರುಷಗಳುಳ್ಳವನು, ಸಹಾಯಸಂಪತ್ತನ್ನು ಪಡೆದವನು, ಧನವಂತನು. ಇವನು ಈ ನಗರದಲ್ಲಿಯೇ ಇದ್ದಲ್ಲಿ ವಿಶೇಷವಾದ ಅಂತಃಕಲಹವನ್ನುಂಟುಮಾಡುವನು; ದೂರವಾಗಿ ಹೊರಡಿಸಿದಲ್ಲಿ ಹೊರಜಗಳವನ್ನುಂಟುಮಾಡಿದರೂ ಉಪಾಯದಿಂದ ಹೇಗೋ ವಶಪಡಿಸಿಕೊಳ್ಳಬಹುದೆಂದೆಣಿಸಿ ಅವನು ಇಲ್ಲಿರುವಾಗಲೇ ಹೃದಯದಲ್ಲಿ ನೆಟ್ಟ ಕೀಲಕದಂತೆ ಕಿತ್ತು ಅವನನ್ನು ದೂರಗೊಳಿಸಿದೆನು.

ರಾಜಂ—ಆರ್ಯನೆ! ಏಕೆ ಬಲಾತ್ಕಾರದಿಂದ ನಿಗ್ರಹಿಸಲಿಲ್ಲ ?

ಚಾಣ—ಅವನು ರಾಕ್ಷಸನಲ್ಲವೆ? ಬಲಾತ್ಕಾರದಿಂದ ನಿಗ್ರಹಿಸಿದಲ್ಲಿ ಆತನು ನಿಮ್ಮ ಬಹಳ ಸೇನೆಗಳನ್ನು ಕೊಂದಾನು? ಅಥವಾ ತಾನಾದರೂ

ಸಶಕ್ತನು. ಹಾಗಾದರೆ ಎರಡುವಿಧದಲ್ಲಿಯೂ ದೋಷವುಂಟು. ನೋಡು.

ಕಂ॥ ಅಳಿದೊಡೆಪೊಣರ್ದವನಂತಹ।
ತುಳಿಲಾಳ್ ನಿನಗಿಲ್ಲದಕ್ಕು ಮಾವ್ಯಥೆಯುಂ ತ್ವ॥
ದ್ಬಳಮುಂ ಮುಡುಹುವುದದರಿಂ।
ಪಳಗಿಪುದು ವನೇಭದಂ ತುಪಾಯದೊ ಳವನಂ॥

ರಾಜಂ—ನಾವು ಆರ್ಯನಬುದ್ಧಿಯನ್ನು ಅತಿಕ್ರಮಿಸಲಾರೆವು. ಎಷ್ಟುವಿಧವಾಗಿ ಯೋಚಿಸಿದರೂ ಈ ವಿಚಾರದಲ್ಲಿ ಅಮಾತ್ಯರಾಕ್ಷಸನೇ ಬಹು ಶ್ಲಾಘ್ಯನು.

ಚಾಣ—(ಕೋಪದಿಂದ) ನೀನು ಅಲ್ಲನೆಂದು ವಾಕ್ಯಶೇಷವೊ? ಎಲಾ ವೃಷಲಾ! ಅವನೇನನ್ನುಮಾಡಿದನು?

ರಾಜಂ— ಕೇಳಬಹುದು. ಯಾವ ಮಹಾತ್ಮನಾದರೆ.

ವೃ॥ ಅರಿವಶಮಾದೊಡಂ ಪುರದೊಳಿಮ್ಮ ಕೊರಲ್ಗಡಿಯಿಟ್ಟು
ಮೆಟ್ಟಿ ನಿ। ರ್ಭರದವನಿರ್ದ ನೆಮ್ಮ ಜಯಘೋಷಣಮುಂ
ತಡೆದಂ ಪ್ರತಾಪದಿಂ॥ ಅರಿದೆನಲಾತ ನೊಡ್ಡಿದುರುತಂತ್ರ
ಗಳಿಂ ಮರುಳಾಗಿ ಮನ್ಮನಂ। ಸರಸರೆನಿಪ್ಪ ನಮ್ಮ ಕಡೆ
ಯಾಪ್ತರುಮುಂ ನೆರೆನಂಬದೀಗಳುಂ॥

ಚಾಣ—(ನಕ್ಕು) ರಾಕ್ಷಸನು ಇದನ್ನು ಮಾಡಿದನೊ? ವೃಷಲನೆ! ನಾನಾದರೇ ಹೀಗೆ ತಿಳಿದುಕೊಂಡೆನು. "ನಂದರಂತೆ ನಿನ್ನನ್ನು ಕಿತ್ತುಹಾಕಿ ನಿನ್ನಂತೆ ಮಲಯಕೇತುವನ್ನು ರಾಜಾಧಿರಾಜಸ್ಥಾನದಲ್ಲಿ ಇಟ್ಟನು" ಎಂದು.

ರಾಜಂ—ಇದನ್ನು ಮಾಡಿದವನೇ ಬೇರೆ. ಈ ವಿಷಯದಲ್ಲಿ ಆರ್ಯನದೇನು?

ಚಾಣ—ಅಯ್ಯೋ! ಮತ್ಸರಿಯೆ!

ವೃ॥ ಕನಲುತೆ ಕಂಪವೊಂದಿದ ಚೆರಲ್ಗೊನೆಯಿಂ ಮುಡಿವಿರ್ಚಿ
ಶತ್ರುನಾ। ಶನಕೆ ದೃಢಪ್ರತಿಜ್ಞೆವಡೆದೆಲ್ಲರು ವೀಕ್ಷಿಸುವಂತೆ

ನಂದರಂ ॥ ಧನಪತಿಯಂತನಂತಧನರಂ ಕುರಿವಿಂಡಿಗೆ ಸಾಟಿಗೈಯುತಂ । ಕಿನಿಸಿದವಾತ್ಯನಂ ಗಣಿಸದಂದದೆ ಕೊಂದವ ನಾವ ನಾಜಿಯೊಳ್ ॥ ವುತ್ತ್ರಂ ॥

ವೃ ॥ ಗಗನದಿ ಮಂಡಲಾಕೃತಿಯೊಳೊಪ್ಪುವ ಪದ್ಮಗಳೆಂಬ ಧೂಮದಿಂ । ದಗಲಿಸಿ ಸೂರ್ಯನಾತಪವು ನೆಣ್ದೆಸೆಯೊಳ್ ಮುಗಿಲೆದ್ದವೊಲ್ ಜಗಂ ॥ ಬಗೆದಿರೆ ನಂದರಿಂ ಮಸಣ ಭೂತಗಳಂ ತಣಿಸುತ್ತೆ ಬಲ್ಮೆಯಿಂ । ಜಗುಳ್ವವ ಸಾರಸಂ ದಳೆದ ಬೆಂಕೆಗಳೀಗಳು ಮಾರವೀಕ್ಷಿಸೈ ॥

ರಾಜಂ—ಇದನ್ನು ಮಾಡಿದವನೇ ಬೇರೆ.

ಚಾಣ—ಆಹ! ಯಾರು ?

ರಾಜಂ—ನಂದಕುಲದ್ವೇಷಿಯಾದ ದೈವವು.

ಚಾಣ—ಅರಿಯದವರು ದೈವವನ್ನು ಹೇಳುವರು.

ರಾಜಂ—ಅರಿತವರು ಆತ್ಮಸ್ತುತಿಯನ್ನು ಮಾಡಿಕೊಳ್ಳುವುದೇ ಇಲ್ಲ

ಚಾಣ—(ಕೋಪದಿಂದ) ವೃಷಲನೆ! ಭೃತ್ಯನಂತೆ ನನ್ನ ಮೇಲೆ ಏರಲೆಳಸುವೆಯೊ?

ವೃ॥ ಕರಮಿರದೋಡುಗುಂ ಸಡಲಿಸಲ್ ಶಿಖೆಯಂ ನೆರೆ ಬಂಧಿಸಿದೊರ್ಡಂ । (ನೆಲವನ್ನು ಕಾಲಿನಿಂದೊದೆದು)

ವೃ॥ ಚರಣಮಿದುಂ ಪ್ರತಿಜ್ಞೆಯನಡರ್ದುದಕಿಂದು ಮರಳ್ದುಯತ್ನಿಕುಂ । ಧುರದಿದಿರಾಂತ ನಂದರವಿನಾಶದೆ ನಂದುತ್ತಿಕುಂದಿದೆನ್ನ ಮ ॥ ತ್ಸರಶಿಖಿಯಂ ಕೆರಳ್ಚುವೆಯ ನೀಂ ಕೆಡುಗಾಲದೊಳೀಗ ದುರ್ಮದಾ! ।

ರಾಜಂ—(ಖಿನ್ನನಾಗಿ ಆತ್ಮಗತಂ) ಆಹಾ! ಇದೇನು ? ನಿಜವಾಗಿಯೇ ಆರ್ಯನು ಕೋಪಗೊಂಡನಲ್ಲಾ. ಹಾಗೆಯೇ ಸರಿ

ವೃ॥ ಕೋಪಾವೇಶಚಲನ್ನಿಮೇಷಗಳ ದಂಬುಕ್ಷಾಳನ ಕ್ಷಾಮಮಾ । ದೀಪಿಂಗೇಕ್ಷಣರೋಚಿಗಳ್ ಸುಡುವವೊಲ್ ಭ್ರೂಧೂಮದಿಂ ಕಾಣ್ಬುಗುಂ ॥ ಕೋಪಂಬೆತ್ತುರೆ ರೌದ್ರಮಂ

ನಟಿಪ ಭೂತೇಶಾನನಾಟ್ಯೋತ್ಸನಾ। ಟೋಪಂ ಪೋಲ್ದಿರ
ಲಳ್ಕು ತುರ್ವಿ ಬಲುಹಿಂತಾಳ್ಗುಂ ಪದಾಘಾತಮುಂ ||

ಚಾಣ—(ಕಪಟಕೋಪವಂ ತೋರಿದು) ವೃಷಲ! ವೃಷಲ! ಇನ್ನು ಉತ್ತರೋ ತ್ತರಗಳು ಸಾಕು ಅಮಾತ್ಯರಾಕ್ಷಸನೇ ನಮಗಿಂತಲೂ ಉತ್ತಮ ನೆಂದು ತಿಳಿದಿದ್ದಲ್ಲಿ, ಅವನಿಗೇ ಈ ಶಸ್ತ್ರವನ್ನು ಕೊಡು.

(ಎಂದು ಶಸ್ತ್ರವನ್ನು ಬಿಸುಟು ಎದ್ದು ಆಕಾಶದಲ್ಲಿ ಲಕ್ಷ್ಯವನ್ನಿಟ್ಟು ಆತ್ಮಗತಂ) ರಾಕ್ಷಸಾ! ರಾಕ್ಷಸಾ! ಕೌಟಿಲ್ಯನ ಬುದ್ಧಿಯನ್ನು ಗೆಲ್ಲಬೇಕೆಂಬ ನಿನ್ನ ಪ್ರಜ್ಞಾತಿಶಯವು ಇದೇ ಅಲ್ಲವೆ ?

ಕಂ || ಪಳಿದಪೆನಾಂ ಸುಖದಿಂದವ ।
ನುಳಿಯಲ್ ಮೌರ್ಯೇಂದು ವಿಷ್ಣುಗುಪ್ತನ ನೆನುತುಂ||
ತಿಳಿದೆಸಗಿದ ಭೇದಮುದೀ ।
ಗಳಿ ನಿನ್ನಂ ಭೇದಿಸಲ್ಕೆ ಹೊಣೆಯಾಗಿಹುದೈ ||

ರಾಜಂ—ಆರ್ಯ ವೈಹೀನರೆ! "ಇನ್ನುಮೇಲೆ ಚಂದ್ರಗುಪ್ತನು ಚಾಣಕ್ಯ ನನ್ನು ಬಿಟ್ಟು ತಾನೇ ರಾಜ್ಯವನ್ನಾಳುವನು" ಎಂದು ಪ್ರಜೆಗಳೆಲ್ಲರಿಗೂ ತಿಳುಹಿಸು.

ಕಂಚು—(ಆತ್ಮಗತಂ) ಇದೇನು ? ಆರ್ಯಚಾಣಕ್ಯನೆಂದು ಹೇಳದೆ ಚಾಣಕ್ಯ ಶಬ್ದವು ನಿರುಪಪದವಾಗಿರುವುದು ಅಕಟಾ! ಅಧಿಕಾರವನ್ನು ಕಿತ್ತು ಕೊಂಡನು. ಅಥವಾ ಈ ವಿಷಯದಲ್ಲಿ ಸ್ವಾಮಿದೋಷವೂ ಇಲ್ಲವಷ್ಟೆ? ಏಕೆಂದರೆ—

ಕಂ || ಮೇದಿನಿಯಾಣ್ಮಂ ನಲವಿಂ ।
ದಾದರಿಸದಿರಲ್ಕಮಾತ್ಯ ದೋಷಮೆ ಬೀಜಂ ||
ಚೋದನುದಾಸೀನತೆಯಿಂ ।
ದಾದಂ ವ್ಯಾಳಾಭಿಧಾನಮುಂ ಪಡೆವುದಿಭಂ ||

ರಾಜಂ—ಆರ್ಯನೆ! ಏನು ಯೋಚಿಸುವೆ?

ಕಂಚು—ಸ್ವಾಮಿಯೇ ಏನೂ ಇಲ್ಲ. ದೈವಯೋಗದಿಂದ ಸ್ವಾಮಿಯು ಇಂದಿಗೆ ಸ್ವಾಮಿಯೆನಿಸಿಕೊಂಡನು.

ರಾಜಂ—(ಆತ್ಮಗತಂ) ನಮ್ಮನ್ನು ಹೀಗೆ ತಿಳಿದುಕೊಳ್ಳುವುದರಿಂದ ಸ್ವಕಾರ್ಯ ಸಿದ್ಧಿಯನ್ನು ಬಯಸುವ ಆರ್ಯನ ಕೋರಿಕೆಯು ನೆರವೇರಲಿ. (ಪ್ರಕಾಶಂ) ಶೋಣೋತ್ತರೆ! ಈ ಶುಷ್ಕಕಲಹದಿಂದ ನನ್ನ ತಲೆಯು ನೋಯುತ್ತಿದೆ. ಮಲಗುವ ಮನೆಯನ್ನು ತೋರಿಸು.

ಪ್ರತೀ—ಸ್ವಾಮಿಯು ಬಿಜಮಾಡಬೇಕು

ರಾಜಂ—(ಆತ್ಮಗತಂ)

ಕಂ|| ಗುರುಶಾಸನದಿಂದಮೆ ತ |
ದ್ಗುರುತೆಯನಲಗಳೆದ ಮನ್ಮನಂ ನೆಲಕಿಳಿದಂ ||
ತಿರೆ ನಿಜದಿಂ ಗುರುವಂ ಧಿ |
ಕ್ಕರಿಪರ ಮನವೆಂತು ಬಿರಿಯದೋ? ನಾಚಿಕೆಯಿಂ ||

(ಎಂದೆಲ್ಲರೂ ತೆರಳಿದರು)

## — ತೃತೀಯಾಂಕಂ ಸಮಾಪ್ತಂ —



# ಚತುರ್ಥಾಂಕಂ.



(ಅನಂತರದಲ್ಲಿ ಪ್ರಯಾಣಿಕನ ವೇಷದಿಂದ ಪುರುಷನು ಪ್ರವೇಶಿಸುವನು)

ಪುರು—ಆಶ್ಚರ್ಯಂ! ಆಶ್ಚರ್ಯಂ!

ಕಂ|| ಅನವಸರದ ಪ್ರಯಾಣದೊಳಗೆ |
ಮನತಿಕ್ರಮಣೀಯಮೆನಿಪ ರಾಜನಿಯೋಗಂ ||
ಅನುವಾಗದೆ ಪಯಣವ ನಾಂ |
ಪನಾವ ಸದರಿಂ ನೃಪಾಜ್ಞೆಯದು ಪಿರಿದಲ್ತೆ!

ಇದೊ! ಅಮಾತ್ಯರಾಕ್ಷಸನ ಮನೆಯು. ಒಳಹೋಗುವೆನು (ಬಳಲಿದವನಂತೆ ನಡೆದು) ಅದಾರಯ್ಯಾ? ಬಾಗಿಲಲ್ಲಿ. ಪಾಟಲೀಪುರದಿಂದ ಕರಭಕನು ತ್ವರೆಗೊಂಡು ಬಂದಿರುವನೆಂದು ಸ್ವಾಮಿಯಾದ ಅಮಾತ್ಯನಿಗೆ ತಿಳುಹಿಸಿರಿ

ದ್ವಾರಪಂ—(ಪ್ರವೇಶಿಸಿ)ಭದ್ರನೆ! ಮೆಲ್ಲಗೆ ಮಾತನಾಡು. ಈ ಅಮಾತ್ಯನು ಕಾರ್ಯಚಿಂತೆಯಿಂದ ನಿದ್ದೆಯಿಲ್ಲದೆ ತಲೆನೋವಿನಿಂದ ಬಳಲುತ್ತಾ ಇನ್ನೂ ಹಾಸಿಗೆಯಿಂದೇಳಲಿಲ್ಲ. ಆದುದರಿಂದ ಕೊಂಚಹೊತ್ತು ನಿಲ್ಲು. ಸಮಯವನ್ನರಿತು ನೀನು ಬಂದಿರುವುದನ್ನು ತಿಳುಹುವೆನು

ಪುರು—ಭದ್ರಮುಖನೆ! ಹಾಗೆಮಾಡು. (ಎಂದು ನಿಲ್ಲುವನು)

(ಅನಂತರದಲ್ಲಿ ಅಮಾತ್ಯನು ಶಯನಗೃಹದಲ್ಲಿ ಪೀಠಗತನಾಗಿ ದುಃಖದಿಂದ ಶಕಟದಾಸನೊಡನೆ ಪ್ರವೇಶಿಸುವನು)

ರಾಕ್ಷ—(ಆತ್ಮಗತಂ)

ವೃ|| ಪರಿಕಿಸುತುಜ್ಜುಗಕ್ಕೆರಗಿದಂದುಮೊದಲ್ ವಿಧಿದುರ್ವಿಲಾಸಮಂ | ದುರುಳನ ವಿಷ್ಣುಗುಪ್ತನ ಕುಬುದ್ಧಿಯ ನಾಲಿಸುತಂತು ಜಾಣ್ಮೆಯಿಂ|| ವಿರಚಿಸುವೆನ್ನ ಕಾರ್ಯತತಿ ನಿಷ್ಫಲಮಾದುದಿದೇತಕಿಂತುಟೆಂ | ದರಸುತೆ ಚಿಂತೆಯಿಂ ಕಳೆವೆನಾವಗ ಮೆಚ್ಚರದಿಂ ದಿರುಳ್ಗಳಂ ||

ಮತ್ರ್ಯಂ —

ವೃ|| ನಸುಬೀಜನ್ಯಾಸಮಂ ಗೆಯ್ದುದನೆ ಬೆಳೆಯಿಪುದ್ಯೋಗಮಂ
ತಾಳ್ದು ಗೂಢಪ್ರಸರಂಗೊಂಡಿರ್ಪಬೀಜೋತ್ಕರಕೆ ಫಲಮ
ನೇಕಾಂತದೊಳ್ ಬುದ್ಧಿಯಿಂ ಚಿಂ|| ತಿಸುತಂ ಕಾರ್ಯಂಗಳಂ
ವಿಸ್ತೃತಮೆನಿಸಿದೊಡಂ ಸಂಗ್ರಹಂಗೆಯ್ಯುತೀಕ್ಲೇ| ಶಸಹಂ
ತಾನಕ್ಕುಮೆನ್ನಂದದ ಜನ ಮುಥವಾ ನಾಟಕಂಗೆಯ್ವನಲ್ತೆ!

ಆ ದುರಾತ್ಮನಾದ ಚಾಣಕ್ಯವಟುವು,

ದ್ವಾರ—(ಪ್ರವೇಶಿಸಿ) ಜಯಿಸಲಿ.

ರಾಕ್ಷ—(ಆತ್ಮಗತಂ) ವಂಚಿಸಲ್ಪಟ್ಟಾನೆ?

ದ್ವಾರ—ಅಮಾತ್ಯನು.

ರಾಕ್ಷ—(ಎಡಗಣ್ಣು ನಡುಗಿದಂತೆ ನಟಿಸಿ) "ದುರಾತ್ಮನಾದ ಚಾಣಕ್ಯವಟುವು ಜಯಿಸಲಿ. ಅಮಾತ್ಯನು ವಂಚಿಸಲ್ಪಟ್ಟಾನು" ಎಂದು ಈಶ್ವರವಾಣಿಯೇ ವಾಮಾಕ್ಷಿಸ್ಪಂದನದಿಂದ ಉಪಶ್ರುತಿಯನ್ನು ಹೇಳುತ್ತಿರುವುದು. ಆದರೂ ಉದ್ಯೋಗವು ಬಿಡತಕ್ಕುದಲ್ಲ. (ಪ್ರಕಾಶಂ) ಅಯ್ಯಾ! ಏನನ್ನು ಹೇಳಬೇಕೆಂದಿರುವೆ?

ದ್ವಾರ—ಅಮಾತ್ಯನೆ! ಕರಭಕನು ಬಾಗಿಲಲ್ಲಿರುವನು.

ರಾಕ್ಷ—ಬೇಗನೆ ಕರೆದುಕೊಂಡುಬಾ.

ದ್ವಾರ—ಹಾಗೆ (ಎಂದು ನಡೆದು ಪುರುಷನ ಬಳಿಗೆ ಹೋಗಿ) ಭದ್ರನೆ! ಅಮಾತ್ಯನ ಬಳಿಗೆ ಹೋಗು. (ಎಂದು ಹೊರಟುಹೋದನು)

ಪುರು—(ಬಳಿಗೆ ಬಂದು) ಅಮಾತ್ಯನಿಗೆ ಜಯವಾಗಲಿ.

ರಾಕ್ಷ—ಅಯ್ಯಾ! ಕುಳಿತುಕೊ.

ಕರಭ—ಆರ್ಯನಾಜ್ಞೆಯಂತಾಗಲಿ. (ಎಂದು ನೆಲದಮೇಲೆ ಕುಳಿತುಕೊಳ್ಳುವನು)

ರಾಕ್ಷ—ಇವನನ್ನು ಯಾವಕೆಲಸಕ್ಕಾಗಿ ಕಳುಹಿಸಿದ್ದೆನೊ? ಕಾರ್ಯಬಾಹುಳ್ಯದಿಂದ ಜ್ಞಾಪಕವಿಲ್ಲ. (ಎಂದು ಯೋಚಿಸುತ್ತಿರುವನು)

(ಅನಂತರದಲ್ಲಿ ವೇತ್ರಪಾಣಿಯಾದ ಮತ್ತೊಬ್ಬ ಪುರುಷನು ಪ್ರವೇಶಿಸುವನು)

ಪುರು—ಅಯ್ಯಾ ಜನಗಳಿರಾ! ದೂರಹೋಗಿರಿ ದೂರಹೋಗಿರಿ. ಇದೋ ಬಂದನು. ಹಿಂದೆರಳಿರಿ ಹಿಂದೆರಳಿರಿ. ನೀವೇನು ನೋಡುವುದಿಲ್ಲವೊ?

ಕಂ|| ಕಲ್ಯಾಣಕುಲಧರತ್ವದೊ |
ಳುಬ್ಬಾಸಮನಾಂತ ದೇವರಂದದ ಭೂಪಾ ||
ವಲ್ಲಭರಂ ನೋಳ್ಪುದು ಮರಿ |
ದಲ್ಲದೆ ಬಳಿಸಲ್ವಬಯಕೆ ಬಡವಗೆರ್ಗಳದೇ? ||

(ಆಕಾಶದಲ್ಲಿ ಕಿವಿಗೊಟ್ಟು) ಅಯ್ಯಾ! ಏನುಹೇಳುವಿರಿ? ಏಕೆ ದೂರಗೊಳಸುವೆಯೆಂದೊ? ಅಯ್ಯಾ! ಇದೊ ಕುಮಾರನಾದ ಮಲಯಕೇತುವು ತಲೆನೋವಿನಿಂದ ಬಳಲುತ್ತಿರುವ ಅಮಾತ್ಯನನ್ನು ನೋಡುವುದಕ್ಕಾಗಿ ಇತ್ತಲೇ ಬರುತ್ತಿರುವನು, ಆದುದರಿಂದ ದೂರಗೊಳಿಸುವೆನು.

(ಎಂದು ಹೊರಟುಹೋದನು)

(ಅನಂತರದಲ್ಲಿ ಮಲಯಕೇತುವು ಕಂಚುಕಿಯನ್ನು ಹಿಂದಿಟ್ಟುಕೊಂಡು ಭಾಗುರಾಯಣನೊಡನೆ ಪ್ರವೇಶಿಸುವನು)

ಮಲ—(ನಿಟ್ಟುಸುರುಬಿಟ್ಟು ಆತ್ಮಗತಂ) ತಂದೆಯು ಪರಲೋಕವನ್ನು ಹೊಂದಿ ಹತ್ತುತಿಂಗಳಾಯಿತು. ವ್ಯರ್ಥವಾಗಿ ಗಂಡೆಂಬ ದುರಭಿಮಾನವನ್ನು ಪಡೆದಿರುವ ನಾನು ತಂದೆಗೆ ತರ್ಪಣವನ್ನು ಕೂಡ ಮಾಡಲಿಲ್ಲ. ಮೊದಲಿಂತು ಪ್ರತಿಜ್ಞೆಯನ್ನು ಮಾಡಿದೆನು.

ವೃ|| ಸೆರಗಮುಜಾರೆ ರನ್ನಕಡಗಂಮುರಿವಂತೆರ್ದೆಗುಟ್ಟಿಕೊಳ್ಳುತಂ | ಕುರುಳಡು ಧೂಳಿಯಿಂ ಬೆರೆಯೆ ಹಾಯೆನುತಾಪರಿಯುಬ್ಬೆಗಂಗೊಳು ತ್ತೊರಲುತಿಹೆನ್ನ || ಮಾತೆಯರವಸ್ಥೆಯು ನೀಗ ಳರಾತಿನಾರಿಯು | ಗೆಯ್ಗಿಸಿ ತಾತಗಾಂ ಬಳಿಕ ಪೈತೃಕತರ್ಪಣಮಂ ನೆಗಳ್ವೆನಂ ||

ಇನ್ನು ಬಹಳಮಾತೇಕೆ?

ಕಂ|| ಅನುಗೊಳಿಸಿ ಬವರನುಂ ಕಲಿ |
ತನದಿಂ ಪಗೆವಡೆಯಂ ಸಿಡಿದು ಮುಡಿವೆಂ ಪಿತೃವೊಲ' ||
ಅಥವಾ|| ಜನನಿಯರ ಕಂಗಳಿಂ ಕಂ |
ಬನಿಗಳ ಸರಿಯುವತಿ ನೇತ್ರಗಳ್ಗಿರಗಿಪೆ ನಾಂ ||

(ಪ್ರಕಾಶಂ) ಆರ್ಯ ಜಾಜಲಿಯೆ ! ನಾನೊಬ್ಬನೇ ಆಕಸ್ಮಿಕವಾದ ಆಗಮನದಿಂದ ಅಮಾತ್ಯನನ್ನು ಪ್ರೀತಿಗೊಳಿಸಲೆಳಸುವೆನು. ಆದುದರಿಂದ ಹಿಂಬಾಲಿಸಿ ಬರುವ ಆಯಾಸವು ಬೇಡವೆಂದು, ಅನುಯಾಯಿಗಳಾದ ರಾಜರಿಗೆ ನಮ್ಮ ಮಾತನ್ನು ತಿಳುಹಿಸು.

ಕಂಚು—ಹಾಗೆಯೇ ಆಗಲಿ (ಎಂದು ನಡೆದು ಆಕಾಶದಲ್ಲಿ) ಅಯ್ಯಾ ರಾಜರಿರಾ ! "ನನ್ನನ್ನು ಯಾರೂ ಹಿಂಬಾಲಿಸಿ ಬರಬೇಕಾದುದಿಲ್ಲ" ಎಂದು ಕುಮಾರನಾಜ್ಞಾಪಿಸುವನು (ಎಂದು ನೋಡಿ ಸಂತೋಷದಿಂದ) ಕುಮಾರನಾಜ್ಞೆ ಮಾಡ ಕೂಡಲೆ ರಾಜರೆಲ್ಲರೂ ಹಿಂದಿರುಗಿದರು. ಕುಮಾರನೆ ! ನೋಡು—

ವೃ || ನಡುಗೊರಲುಬ್ಬಿ ಮುಂಗೊರಲಡಂಗಿರೆ ತೀಕ್ಷ್ಣಖಲೀನ
ಕರ್ಷದಿಂ | ಸೆಡೆಮು ಖುರಾಗ್ರಗಳಿಂ ನಭವ ಖಾಡಿಸುವಂತಿಹ
ವಾಜಿವಂಗಳಂ || ಪಿಡಿದ ರಿಂಭಾಗಳಂ ಕೆಲಬರೊಯ್ಯನೆ
ಗಂಟೆಗಳಾಡದಂತೆ ಪಿ | ನ್ನಡೆಯಿಪ ರೀಶ ! ದಾಂಟಿರಿವ
ರಬ್ಧಿಗಳಂ ವಡೆ ನಿನ್ನ ನೇಮಮಂ ||

ಮಲ—ಆರ್ಯನೆ ! ನೀನೂ ಪರಿಜನದೊಡನೆ ಹಿಂದಿರುಗು, ಭಾಗುರಾಯಣನೊಬ್ಬನು ನನ್ನನ್ನು ಹಿಂಬಾಲಿಸಲಿ.

ಕಂಚು—ಹಾಗೆಯೇ (ಎಂದು ಪರಿಜನದೊಡನೆ ಹೊರಟುಹೋದನು).

ಮಲ—ಮಿತ್ರ ಭಾಗುರಾಯಣನೆ ! ಭದ್ರಭಟಪ್ರಮುಖರು ಇಲ್ಲಿಗೆ ಬಂದಾಗ "ದುಷ್ಟಾಮಾತ್ಯನಿಗೆ ವಶನಾದ ಚಂದ್ರಗುಪ್ತನಿಂದ ಅಸಮಾಧಾನಗೊಂಡಿರುವ ನಾವು ಅಭಿರಾಮಗುಣಯೋಗದಿಂದ ಆಶ್ರಯಣೀಯನಾದ ಕುಮಾರನನ್ನು, ಕುಮಾರನ ಸೇನಾಪತಿಯಾದ ಶಿಖರಸೇನನಮೂಲಕ

ವಾಗಿ ಆಶ್ರಯಿಸುವೆನೇ ಹೊರತು, ಅಮಾತ್ಯರಾಕ್ಷಸನನ್ನು ಖಾಂತರವಾಗಿ ಆಶ್ರಯಿಸುವುದಿಲ್ಲ'' ಎಂದು ನನ್ನನ್ನು ಬೇಡಿಕೊಂಡರು. ಅದನ್ನು ನಾನು ಬಹುಕಾಲದಿಂದ ಯೋಚಿಸಿದರೂ, ಅವರ ಮಾತಿನ ಅಭಿಪ್ರಾಯವೇನೋ ತಿಳಿಯಲಿಲ್ಲವಲ್ಲ.

ಭಾಗು—ಕುಮಾರನೆ! ಇದನ್ನು ತಿಳಿಯುವದೇನು ಕಷ್ಟವಲ್ಲ. ಜಯಶಾಲಿಯೂ, ಗುಣಾಢ್ಯನೂ, ಆಶ್ರಯಣೀಯನೂ ಆದ ಪ್ರಭುವನ್ನು ಪ್ರಿಯಮಿತ್ರನ ಮೂಲಕವಾಗಿ ಆಶ್ರಯಿಸಬೇಕೆಂಬುದು ನ್ಯಾಯವಾಗಿಯೇ ಇರುವುದಷ್ಟೆ!

ಮಲ—ಮಿತ್ರನೆ! ಭಾಗುರಾಯಣ! ಅಮಾತ್ಯನು ನಮಗೆ ಪರಮಮಿತ್ರನೂ ಅತ್ಯಂತಪ್ರಿಯನೂ ಆಗಿರುವನಷ್ಟೆ!

ಭಾಗು—ಅದೇನೋ ದಿಟ. ಆದರೆ ಅಮಾತ್ಯನಿಗೆ ಚಾಣಕ್ಯನಲ್ಲಿ ದ್ವೇಷವಿರುವುದೇ ಹೊರತು ಚಂದ್ರಗುಪ್ತನಲ್ಲಿಲ್ಲ. ಒಮ್ಮೆ ಚಂದ್ರಗುಪ್ತನು "ನಾನೇ ಜಯಶಾಲಿಯು" ಎಂದು ಹೆಮ್ಮೆಗೊಂಡಿರುವ ಚಾಣಕ್ಯನ ಗರ್ವಂ ಸಹಿಸಲಾರದೆ ಅವನನ್ನು ಮಂತ್ರಿತ್ವದಿಂದ ತೆಗೆದಾನು. ಆಗ ನಂದವಂಶದಲ್ಲಿರುವ ಭಕ್ತಿಯಿಂದಲೂ, ಮಿತ್ರಜನಾಪೇಕ್ಷೆಯಿಂದಲೂ, ಇವನೂ ನಂದವಂಶೀಯನೇ ಎಂದೆಣಿಸಿ ಅಮಾತ್ಯನು ಚಂದ್ರಗುಪ್ತನೊಡನೆ ಸಂಧಿಯನ್ನು ಮಾಡಿಕೊಂಡಾನು. ಚಂದ್ರಗುಪ್ತನೂ "ಇವನು ವಂಶಾನುಕ್ರಮದಿಂದ ಬಂದವನೇ" ಎಂದು ಸಂಧಿಗೊಡಂಬಟ್ಟಾನು. ಹೀಗಾದರೆ ಕುಮಾರನು ನಮ್ಮನ್ನು ನಂಬಲಾರನು, ಎಂಬುದೇ ಇವರ ಮಾತಿನ ಅಭಿಪ್ರಾಯವು.

ಮಲ—ಸರಿಯಾಗಿರುವುದು. ಅಮಾತ್ಯನ ಮನೆಯನ್ನು ತೋರಿಸು.

ಭಾಗು—ಕುಮಾರನು ಬಿಜಮಾಡಬೇಕು, ಬಿಜಮಾಡಬೇಕು.

(ಇಬ್ಬರೂ ಹೊರಡುವರು)

ಭಾಗು—ಇದೇ ಅಮಾತ್ಯನ ಮನೆಯು. ಕುಮಾರನು ಪ್ರವೇಶಿಸಬಹುದು.

ಮಲ— ಇದೊ ಒಳಹೊಗುವೆನು.

ರಾಕ್ಷ—(ಆತ್ಮಗತಂ) ಓಹೊ ! ಜ್ಞಾಪಕಬಂದಿತು (ಪ್ರಕಾಶಂ) ಭದ್ರನೆ! ನೀನು ಕುಸುಮಪುರದಲ್ಲಿ ಸ್ತನಕಲಶನನ್ನು ಕಂಡಿದ್ದೆಯು ?

ಪುರು—ಅಮಾತ್ಯನೆ ! ಅಹುದು.

ಮಲ—(ಕೇಳಿ) ಭಾಗುರಾಯಣನೆ ! ಕುಸುಮಪುರ ವೃತ್ತಾಂತವು ನಡೆಯುತ್ತಿರುವುದು. ಇಲ್ಲಿಗೆ ನಾವು ಹೋಗಬಾರದು ಕೇಳಿರೋಣ ಏಕೆಂದರೆ-

ಕಂ ॥ ಮರೆಗೊಳಿಸಿ ದಿಟವು ನಳ್ಕಿಂ ।
ಪರಸರ ಮುಂದೊರೆವ ರಿಲ್ಲಮದ ನಾ ಸಚಿವರ್ ॥
ಮರೆಯೊಳ್ ಸ್ವೈರಾಲಾಪವ ।
ನರಿಯಲ್ ವಿವೃತಾರ್ಥಮಪ್ಪುದದು ದಿಟವುಲ್ತೆ ! ॥

ಭಾಗು—ಕುಮಾರನಾಜ್ಞೆಯಂತಾಗಲಿ. (ಎಂದೀರ್ವರು ನಿಂತು ಕೇಳುವರು)

ರಾಕ್ಷ—ಭದ್ರನೆ! ಆ ಕೆಲಸವು ಆಯಿತೆ ?

ಪುರು—ಅಮಾತ್ಯನನುಗ್ರಹದಿಂದ ಆಯಿತು.

ಮಲ—ಮಿತ್ರ ಭಾಗುರಾಯಣನೆ ! ಆ ಕೆಲಸವಾವುದು ?

ಭಾಗು—ಕುಮಾರನೆ ! ಮಂತ್ರಿಗಳ ಸಮಾಚಾರವು ಗಹನವಾಗಿರುವುದು. ಇಷ್ಟರಿಂದಲೆ ನಿಶ್ಚಯಿಸುವುದಕ್ಕಾಗಲಾರದು, ಆದುದರಿಂದ ಕಿವಿಗೊಟ್ಟು ಕೇಳು.

ರಾಕ್ಷ—ಭದ್ರನೆ! ವಿಸ್ತರದಿಂದ ಕೇಳಲಪೇಕ್ಷಿಸುವೆನು.

ಪುರು—ಅಮಾತ್ಯನು ಲಾಲಿಸಬೇಕು. “ಸ್ತನಕಲಶನೆ! ಕುಸುಮಪುರಕ್ಕೆ ಹೋಗು, ಆ ಚಾಣಕ್ಯಹತಕನು ಯಾವಯಾವ ಕಾಲಗಳಲ್ಲಿ ಆಜ್ಞಾಭಂಗಮಾಡುವನೊ, ಆಗಾಗ ಉತ್ತೇಜಕಗಳಾದ ಶ್ಲೋಕಗಳಿಂದ ಚಂದ್ರಗುಪ್ತನನ್ನು ಹೊಗಳಿ ಕಲಿಸಬೇಕೆಂದು ನಾನು ಹೇಳಿದಂತೆ ಸ್ತನಕಲಶನಿಗೆ ಹೇಳು” ಎಂದು ನಾನಮಾತ್ಯನಿಂದಾಜ್ಞಪ್ತನಾದೆನಷ್ಟೆ!

ರಾಕ್ಷ—ಆಮೇಲಾಮೇಲೆ ?

ಪುರು—ಆಮೇಲೆ ನಾನು ಅಮಾತ್ಯನಪ್ಪಣೆಯಂತೆ ಪಾಟಲೀಪುರಕ್ಕೆ ಹೋಗಿ ವೈತಾಳಿಕನಾದ ಸ್ತನಕಲಶನಿಗೆ ಅಮಾತ್ಯನಪ್ಪಣೆಯನ್ನು ತಿಳುಹಿಸಿದೆನು. ಈ ಮಧ್ಯದಲ್ಲಿ ನಂದಕುಲನಾಶದಿಂದ ದುಃಖಿತರಾದ ಪುರಜನರನ್ನು ಸಂತೋಷಗೊಳಿಸಬೇಕೆಂದು, ಚಂದ್ರಗುಪ್ತರಾಜನು ಕೌಮುದೀಮಹೋತ್ಸವವನ್ನು ನಡೆಯಿಸುವಂತೆ ಡಂಗುರವನ್ನು ಹೊಯ್ಸಿದನು. ಬಹುಕಾಲದಿಂದ ನಡೆಯುತ್ತಿದ್ದ ಚಿರಪರಿಚಿತವಾದ ಆ ಉತ್ಸವವನ್ನು ನಾಗರಿಕರೆಲ್ಲರೂ ಪ್ರಿಯವಧೂಸಮಾಗಮದಂತೆ ಸಂತೋಷದಿಂದ ಸಮ್ಮತಿಸಿದರು.

ರಾಕ್ಷ—(ಕಣ್ಣೀರುತುಂಬಿ) ಆಹಾ ! ಸ್ವಾಮಿಯಾದ ನಂದನೆ !

ಕಂ|| ಕುಮುದಾನಂದಕರಂ ಚಂ |
ದ್ರಮ ನಿರ್ಗ್ಗೂಢ ಮಂದಮೆನಿಪುದೇಂ ಕೌಮುದಿ? ಲೋ
ಕಮನಾನಂದಂಗೊಳಿಸುವ |
ಕಮನೀಯ ನೃಪಾಲಚಂದ್ರ! ನೀನಿಲ್ಲದಿರಲ್ ||

ಪುರು—ಅನಂತರದಲ್ಲಿ ಆ ಚಾಣಕ್ಯಹತಕನು ಚಂದ್ರಗುಪ್ತನ ಸಮ್ಮತಿಯಿಲ್ಲದಂತೆಯೇ ಲೋಕನೇತ್ರಾನಂದಕರವಾದ ಆ ಕೌಮುದೀ ಮಹೋತ್ಸವವನ್ನು ನಿಲ್ಲಿಸಿದನು. ಆ ಸಮಯದಲ್ಲಿ ಸ್ತನಕಲಶನು ಚಂದ್ರಗುಪ್ತನನ್ನು ಉತ್ತೇಜಕಗಳಾದ ಶ್ಲೋಕಗಳಿಂದ ಕೊಂಡಾಡಿದನು.

ರಾಕ್ಷ—ಅದು ಹೇಗೆ?

ಪುರು—ಕಲಿತನಕಾಕರಂಗಳೆನೆ (ಎಂದು ಹಿಂದಣ ಪದ್ಯಗಳನ್ನು ಹೇಳುವನು.)

ರಾಕ್ಷ—ಭಾಪು ! ಸ್ತನಕಲಶನೆ! ಭಾಪು ! ಸಕಾಲದಲ್ಲಿ ಭೇದಬೀಜವನ್ನು ಬಿತ್ತಿದೆ. ಅವಶ್ಯವಾಗಿ ಫಲವನ್ನು ತೋರಿಸಲೇತೋರಿಸುವುದು, ಏಕೆಂದರೆ—

ಕಂ || ಸರಸಕ್ರೀಡಾಸುಖಮಂ |
ಮುರಿಯ ಲವಂ ಮೂಢನಾದೊಡಂ ಸೈರಿಸ ನಿಂ ||
ತಿರೆ ಲೋಕಾಧಿಕತರ ಭಾ |
ಸ್ವರ ತೇಜಮ ನಾಂತ ಭೂಪರಂ ಪೇಳ್ವುದೇಂ ? ||

ಮಲ—ಹೀಗೆಯೇ ಸರಿ.

ರಾಕ್ಷ—ಆಮೇಲಾಮೇಲೆ

ಪುರು—ಬಳಿಕ ಆಜ್ಞಾಭಂಗದಿಂದ ಕಲುಷಿತನಾದಚಂದ್ರಗುಪ್ತನು ಪ್ರಸಂಗ ಸೂಚಿತಗಳಾದ ಅಮಾತ್ಯನ ಗುಣಗಳನ್ನು ಕೊಂಡಾಡಿ ಚಾಣಕ್ಯಹತಕನನ್ನು ಅಧಿಕಾರದಿಂದ ಹೊರಡಿಸಿದನು.

ಮಲ—ಮಿತ್ರ ಭಾಗುರಾಯಣನೆ! ಚಂದ್ರಗುಪ್ತನು ಗುಣಪ್ರಶಂಸೆಯನ್ನು ಮಾಡಿದುದರಿಂದ ರಾಕ್ಷಸನಲ್ಲಿ ತನಗೆ ಭಕ್ತಿಯುಂಟೆಂಬುದನ್ನು ತೋರಿಸಿದಂತಾಯಿತಲ್ಲವೆ?

ಭಾಗು—ಚಾಣಕ್ಯನನ್ನು ಹೊರಡಿಸಿದುದರಿಂದ ತೋರಿಸಿದಷ್ಟು ಪಕ್ಷಪಾತವನ್ನು ಗುಣಪ್ರಶಂಸೆಯಿಂದ ತೋರಿಸಿದಂತಾಗಲಿಲ್ಲ.

ರಾಕ್ಷ—ಚಂದ್ರಗುಪ್ತನು ಚಾಣಕ್ಯನಲ್ಲಿ ಕೋಪಗೊಳ್ಳುವದಕ್ಕೆ ಕೌಮುದೀ ಮಹೋತ್ಸವವನ್ನು ತಡೆಮಾಡಿದುದು ಒಂದೇ ಕಾರಣವೊ? ಅಥವಾ ಮತ್ತಾವದಾದರೂ ಉಂಟೊ?

ಮಲ—ಮಿತ್ರನೆ! ಚಂದ್ರಗುಪ್ತನ ಇತರ ಕೋಪಕಾರಣಗಳನ್ನು ತಿಳಿಯುವುದರಿಂದ ಇವನಿಗಾಗುವ ಪ್ರಯೋಜನವೇನು?

ಭಾಗು—ಬುದ್ಧಿಶಾಲಿಯಾದ ಚಾಣಕ್ಯನು ನಿಷ್ಪ್ರಯೋಜನವಾಗಿ ಚಂದ್ರಗುಪ್ತನನ್ನು ಕೋಪಗೊಳಿಸಲಾರನು. ಕೃತಜ್ಞನಾದ ಚಂದ್ರಗುಪ್ತನೂ ಇಷ್ಟುಮಾತ್ರದಿಂದಲೇ ಆತನ ಗೌರವವನ್ನು ಉಲ್ಲಂಘಿಸಲಾರನು, ಆದುದರಿಂದ ಚಾಣಕ್ಯಚಂದ್ರಗುಪ್ತರಿಗೆ ಪ್ರಬಲವಾದಕಾರಣದಿಂದ ವಿಯೋಗವುಂಟಾಗಿದ್ದಲ್ಲಿ ಅದೇ ಆತ್ಯಂತಿಕವಾಗುವದು, ಎಂಬುದೇ ಪ್ರಯೋಜನವು.

ಪುರು—ಉಂಟು. ಕುಸುಮಪುರದಿಂದ ಹೊರಟುಹೋಗುವಾಗ ಮಲಯಕೇತುವನ್ನೂ, ಅಮಾತ್ಯರಾಕ್ಷಸನನ್ನೂ ನಿಗ್ರಹಿಸದೆ ಚಾಣಕ್ಯನು ಉಪೇಕ್ಷಿಸಿದನೆಂಬುದೇ ಚಂದ್ರಗುಪ್ತನ ಕೋಪಕ್ಕೆ ಮತ್ತೊಂದು ಕಾರಣವು.

ರಾಕ್ಷ—(ಸಂತೋಷದಿಂದ) ಶಕಟದಾಸನೆ! ಭಾಪು! ಚಂದ್ರಗುಪ್ತನು ಈಗ ನನ್ನ ಕೈಗೆ ಸಿಕ್ಕಿದನು. ಇನ್ನು ಚಂದನದಾಸನಿಗೆ ಸೆರೆಯಿಂದ ಬಿಡುಗಡೆಯೂ ನಿನಗೆ ಮಡದಿಮಕ್ಕಳೊಡನೆ ಸಮಾಗಮವೂ, ಜೀವಸಿದ್ಧಿ ಪ್ರಭೃತಿಗಳ ಕಷ್ಟಪರಿಹಾರವೂ ಆಗುವುದು.

ಮಲ—ಮಿತ್ರ ಭಾಗುರಾಯಣನೆ! ಚಂದ್ರಗುಪ್ತನು ಈಗ ನನ್ನ ಕೈಗೆ ಸಿಕ್ಕಿದನೆಂದು ಹೇಳುವ ಇವನ ಅಭಿಪ್ರಾಯವೇನು?

ಭಾಗು—ಇನ್ನೇನು? ಚಾಣಕ್ಯನಿಂದ ಅಗಲಿದ ಚಂದ್ರಗುಪ್ತನನ್ನುದ್ಧರಿಸುವುದಕ್ಕಿಂತಲೂ ಇವನಿಗೆ ಅವಶ್ಯವಾದ ಕಾರ್ಯವೇನಿರುವುದು?

ರಾಕ್ಷ—ಭದ್ರನೆ! ಅಧಿಕಾರವನ್ನು ಕಳೆದುಕೊಂಡ ಆ ವಟುವು ಈಗೆಲ್ಲಿರುವನು?

ಪುರು—ಆ ಪಾಟಲೀಪುರದಲ್ಲಿಯೇ ಇರುವನು.

ರಾಕ್ಷ—(ದುಃಖದಿಂದ) ಅಯ್ಯೋ! ಅಲ್ಲಿಯೇ ಇರುವನೆ? ತಪೋವನಕ್ಕೆ ಹೋಗಲಿಲ್ಲವೆ? ಅಥವಾ ಮರಳಿ ಪ್ರತಿಜ್ಞೆಯನ್ನೂ ಮಾಡಲಿಲ್ಲವೇ?

ಪುರು—ಅಮಾತ್ಯನೆ! ತಪೋವನಕ್ಕೆ ಹೊರಡುವನೆಂದು ಸುದ್ದಿಯಿದೆ.

ರಾಕ್ಷ—ಶಕಟದಾಸನೆ! ಇದು ಯುಕ್ತವಾಗಿ ತೋರುವುದಿಲ್ಲ. ನೋಡು—

ಕಂ|| ಮನುಜೇಂದ್ರ ನಂದನಗ್ರಾ |
ಸನದಿಂ ನೂಂಕಿಸಿದ ನಿಕೃತಿಯುಂ ಸಹಿಸದ ಕೊ ||
ಪನನೆಂತುಟು? ತನ್ನಿಂ ದೊರೆ |
ತನವಾಂತಾ ವೃಷಲನಿಂ ತಿರಸ್ಕೃತ ನಕ್ಕುಂ ||

ಮಲ—ಮಿತ್ರ ಭಾಗುರಾಯಣನೆ! ಚಾಣಕ್ಯನು ಕಾಡಿಗೆ ಹೋಗುವುದರಿಂದಾಗಲಿ, ಅಥವಾ ಮರಳಿ ಪ್ರತಿಜ್ಞೆಯನ್ನು ಮಾಡುವುದರಿಂದಾಗಲಿ ಇವನಿಗಾಗುವ ಸ್ವಾರ್ಥಸಿದ್ಧಿಯೇನು?

ಭಾಗು—ಇದನ್ನು ತಿಳಿಯುವುದೇನು ಬಹಳ ಕಷ್ಟವಲ್ಲ! ಚಾಣಕ್ಯಹತಕನು ಚಂದ್ರಗುಪ್ತನಿಗೆಷ್ಟೆಷ್ಟು ದೂರವಾಗುವನೊ, ಈತನ ಕೆಲಸವು ಅಷ್ಟಷ್ಟು ಕೈಗೂಡುವುದು.

ಶಕಟ—ಅಮಾತ್ಯನೆ! ಬೇರೆ ಯೋಚಿಸಬೇಡ. ಇದು ಯುಕ್ತವಾಗಿಯೇ ಇರುವುದು, ನೋಡು.

ವೃ|| ಸ್ವೈರಿಪನೇಂ ಶಿರೋಮಣಿ ಮಯೂಖಲಸತ್ಕಚ ಭೂಮಿಪಾಲ ಕೋ| ಟೀರ ಸಮರ್ಚಿತಾಂಘ್ರಿ ವೃಷಲಂ ಕಿಡೆ ಸೇವಕರಿಂ ಸ್ವಶಾಸನಂ || ಆರಯೆ ವಿಷ್ಣುಗುಪ್ತ ನತಿಕಷ್ಟದೆ ಪಂತವನೊರ್ಮೆ ಗೆಲ್ದೊಡಂ | ಪಾರದೆ ಮತ್ತಮಾರಚಿಸನಾಶ್ರಿತಮಂ ಬಹುದುಃಖಭೀತಿಯಿಂ ||

ರಾಕ್ಷ—ಶಕಟದಾಸನೆ! ಹಾಗೆಯೇಸರಿ. ಇನ್ನು ನಡೆ. ಕರಭಕನನ್ನು ವಿಶ್ರಾಂತಿಗೊಳಿಸು.

ಶಕಟ—ಹಾಗೆಯೇ ಆಗಲಿ. (ಎಂದು ಪುರುಷನೊಡನೆ ಹೊರಟುಹೋದನು)

ರಾಕ್ಷ—ನಾನು ಕುಮಾರನನ್ನು ನೋಡಲೆಳಸುವೆನು.

ಮಲ—ನಾನೇ ಆರ್ಯನನ್ನು ನೋಡುವುದಕ್ಕೆ ಬಂದೆನು.

ರಾಕ್ಷ—(ನೋಡಿ) ಓಹೊ ಕುಮಾರನು! (ಎಂದು ಆಸನದಿಂದೆದ್ದು) ಇದೋ ಪೀಠವು. ಕುಮಾರನು ಕುಳಿತುಕೊಳ್ಳಬೇಕು.

ಮಲ—ನಾನು ಕುಳಿತುಕೊಳ್ಳುವೆನು. ಆರ್ಯನು ಕುಳಿತುಕೊಳ್ಳಬೇಕು.

(ಎಂದೆಲ್ಲರೂ ಯಥೋಚಿತವಾಗಿ ಕುಳಿತುಕೊಳ್ಳುವರು).

ಮಲ—ಆರ್ಯನೆ! ತಲೆನೋವು ಸಹ್ಯವಾಗಿರುವುದೆ?

ರಾಕ್ಷ—ಕುಮಾರನೆ! ಕುಮಾರನೆಂಬ ನಿನ್ನ ಹೆಸರಿಗೆ ಬದುಲಾಗಿ ಅಧಿರಾಜನೆಂಬ ಹೆಸರನ್ನು ನೆಲೆಗೊಳಿಸಿದಲ್ಲದೆ ನನ್ನ ತಲೆನೋವು ಹೇಗೆತಾನೇ ಸಹ್ಯವಾದೀತು?

ಮಲ—ಆರ್ಯನು ಹಿಡಿದಿರುವ ಈ ಕಾರ್ಯವು ಅಸಾಧ್ಯವಾಗಲಾರದು. ಆದುದರಿಂದ ನಾವು ಸೇನೆಗಳನ್ನು ಸಿದ್ಧಪಡಿಸಿಕೊಂಡಿದ್ದರೂ ಶತ್ರುಗಳ ವ್ಯಸನಕಾಲವನ್ನು ನಿರೀಕ್ಷಿಸುತ್ತಾ ಇನ್ನೆಷ್ಟುದಿನಗಳು ಸುಮ್ಮನಿರಬೇಕು?

ರಾಕ್ಷ—ಇನ್ನು ಕಾಲಹರಣಕ್ಕೆ ಅವಕಾಶವೇಕೆ? ವಿಜಯಪ್ರಯಾಣವಂ ಬೆಳೆಯಿಸು.

ಮಲ—ಆರ್ಯನೆ! ಶತ್ರುವ್ಯಸನವೇನಾದರೂ ತಿಳಿಯಿತೆ?

ರಾಕ್ಷ—ಚೆನ್ನಾಗಿ ತಿಳಿಯಿತು.

ಮಲ—ಅದಾವುದು?

ರಾಕ್ಷ—ಮತ್ತಾವುದು? ಮಂತ್ರಿವ್ಯಸನವು. ಚಂದ್ರಗುಪ್ತನು ಚಾಣಕ್ಯನಿಂದ ಬೇರೆಯಾದನು.

ಮಲ—ಆರ್ಯನೆ! ಮಂತ್ರಿವ್ಯಸನವು ವ್ಯಸನವೇ ಅಲ್ಲ.

ರಾಕ್ಷ—ಕುಮಾರನೆ! ಇತರ ರಾಜರಿಗೆ ಒಂದುವೇಳೆ ಮಂತ್ರಿವ್ಯಸನವು ವ್ಯಸನವಲ್ಲದೇ ಹೋದೀತು. ಚಂದ್ರಗುಪ್ತನಿಗೆ ಹಾಗಲ್ಲ.

ಮಲ—ಆರ್ಯನೆ! ಚಂದ್ರಗುಪ್ತನಿಗೆ ಮತ್ತೂ ವಿಶೇಷವಲ್ಲವೆ?

ರಾಕ್ಷ—ಕುಮಾರನೆ! ಚಂದ್ರಗುಪ್ತನಿಗೆ ಮಂತ್ರಿವ್ಯಸನವು ವ್ಯಸನವೇ ಅಲ್ಲವೆನ್ನುವುದಕ್ಕೆ ಕಾರಣವೇನು?

ಮಲ—ಆರ್ಯನೆ! ಚಂದ್ರಗುಪ್ತನಪ್ರಜೆಗಳಿಗೆ ಚಾಣಕ್ಯನ ದೋಷಗಳೇ ಅಸಮಾಧಾನಕಾರಣಗಳು. ಅವನನ್ನು ನಿರಾಕರಿಸಿದಮೇಲೆ ಮೊದಲಿಂದಲೂ ಚಂದ್ರಗುಪ್ತನಲ್ಲಿ ಅನುರಕ್ತರಾಗಿಯೇ ಇರುವ ಪ್ರಜೆಗಳು ಈಗ ಮತ್ತಷ್ಟು ಅಧಿಕವಾಗಿ ಅನುರಾಗವನ್ನು ತೋರಿಸುವರು.

ರಾಕ್ಷ—ಕುಮಾರನೆ! ಹಾಗಲ್ಲ. ಆ ಪ್ರಜೆಗಳಲ್ಲಿ ಎರಡು ಪಂಗಡಗಳುಂಟು, ಕೆಲವರು ಚಂದ್ರಗುಪ್ತಸಹೋತ್ಥಾಯಿಗಳು, ಕೆಲವರು ನಂದಾನುರಕ್ತರು, ಅವರಲ್ಲಿ ಚಾಣಕ್ಯನ ದೋಷಗಳು ಚಂದ್ರಗುಪ್ತನೊಡನಾಡಿಗಳಿಗೆ ಮಾತ್ರವೇ ದ್ವೇಷಕಾರಣಗಳೇಹೊರತು ನಂದಾನುರಕ್ತರಿಗಲ್ಲ. ಆ ನಂದಾನುರಕ್ತರಾದರೆ ಪಿತೃಭೂತವಾದ ನಂದವಂಶವನ್ನು ಕೃತಘ್ನನಾದ ಇವನೇ ಕೊಲ್ಲಿಸಿದನೆಂದು ವಿರಾಗಾಮರ್ಷಗಳನ್ನು ಪಡೆದು, ಅಪಕೃತರಾಗಿದ್ದರೂ ಆಶ್ರಯಾಂತರವಿಲ್ಲದೆ ಆ ಚಂದ್ರಗುಪ್ತನನ್ನೇ ಅನುಸರಿಸಿಕೊಂಡಿರುವರು. ಶತ್ರುನಿಗ್ರಹದಲ್ಲಿ ನಂಬಿಕೆಯಾದ ಪರಾಕ್ರಮದಿಂದ ಎದಿರಟ್ಟಿಬರುವ ನಿನ್ನಂತವನನ್ನು ಹೊಂದಿದ ಬಳಿಕ ಬೇಗನೆ ಅವನನ್ನು ಬಿಟ್ಟು ನಿನ್ನನ್ನೇ ಆಶ್ರಯಿಸುವರೆಂಬುದರಲ್ಲಿ ಕುಮಾರನಿಗೆ ನಾವೇ ನಿದರ್ಶನವು.

ಮಲ—ಆರ್ಯನೆ! ನಾವು ಚಂದ್ರಗುಪ್ತನಮೇಲೆ ದಂಡೆತ್ತುವುದಕ್ಕೆ ಮಂತ್ರಿ ವ್ಯಸನವು ಒಂದೇ ಕಾರಣವೋ? ಅಥವಾ ಬೇರೆಯಾವದಾದರೂ ಕಾರಣವುಂಟೊ?

ರಾಕ್ಷ—ಬೇರೆ ಹಲವು ಕಾರಣಗಳು ಏಕೆ? ಇದೇ ಇಲ್ಲಿ ಅತ್ಯಂತ ಮುಖ್ಯ ಕಾರಣವು

ಮಲ—ಅತ್ಯಂತ ಮುಖ್ಯವು ಹೇಗೆ? ಈಗ ಚಂದ್ರಗುಪ್ತನು ರಾಜ್ಯಭಾರ ವನ್ನು ಮತ್ತೊಬ್ಬ ಮಂತ್ರಿಯಲ್ಲಾಗಲಿ, ಅಥವಾ ತನ್ನಲ್ಲಿಯೇ ಆಗಲಿ ಇಟ್ಟುಕೊಂಡು ಪ್ರತೀಕಾರವನ್ನು ಮಾಡಲಾರನೆ?

ರಾಕ್ಷ—ಅಹುದು, ಮಾಡಲಾರನು. ಏಕೆಂದರೆ—ಸ್ವಾಯತ್ತಸಿದ್ಧಿಗಳು ಅಥವಾ ಉಭಯಾಯತ್ತಸಿದ್ಧಿಗಳು ಆದ ರಾಜರಲ್ಲಿ ಇದು ಒಮ್ಮೆ ಸಂಭವಿಸೀತು. ದುರಾತ್ಮನಾದ ಚಂದ್ರಗುಪ್ತನಾದರೊ ಕುರುಡ ನಂತೆ ಲೋಕವ್ಯವಹಾರವನ್ನೇ ಅರಿಯದೆ ಯಾವಾಗಲೂ ಮಂತ್ರಿಗೆ ವಶನಾಗಿಯೇ ಇರುವನು. ಆದುದರಿಂದ ಅವನು ಹೇಗೆತಾನೇ ಪ್ರತೀ ಕಾರವನ್ನು ಮಾಡಬಲ್ಲನು?

ಕಂ|| ಅರಸನೆಮಾತ್ಯನು ವೊಂದಾ |
ಗಿರೆ ಸಿರಿಯುಡಿಯೂರಿ ನೆಲಸಿದಪ ಳಿಲ್ಲದಿರಲ್ ||
ಭರಮಂ ಪೊರಲಾರದೆ ಯಿಾ |
ರ್ವರೊಳೋರ್ವನ ನುಳಿವ ಳಬಲೆಯುರ್ಗಿದು ಸಹಜಂ||

ಕಂ|| ವೊಲೆಯುಣ್ಬೆಳಗೂಸದು ತಾ |
ಯ್ಮೊಲೆವಿಡದಂ ತೇನುಮರಿಯದೆಲ್ಲಮಮಾತ್ಯಂ ||
ಗೊಲಿದೊಪ್ಪಿಸಿ ದಜ್ಞನೃಪಂ |
ನೆಲಸಿರನಾ ಸಚಿವನಿಲ್ಲದೊಂದು ಕ್ಷಣಮುಂ ||

ಮಲ—(ಆತ್ಮಗತಂ) ದೈವಯೋಗದಿಂದ ನಾನು ಮಂತ್ರಿಗೆ ವಶನಾಗಲಿಲ್ಲ. (ಪ್ರಕಾಶಂ) ಹೀಗೆಯೇ ಸರಿ. ಆದರೂ ದಂಡಯಾತ್ರಾಕಾರಣಗಳು ಹೇರಳವಾಗಿರುವಾಗ, ಮಂತ್ರಿ ವ್ಯಸನವನ್ನೇ ಹುಡುಕಿ ಶತ್ರುಗಳಮೇಲೆ ದಂಡೆತ್ತುವವನಿಗೆ ಜಯವುಂಟಾಗುವುದು ನಿಯತವಲ್ಲ.

ರಾಕ್ಷ—ಕುಮಾರನು ತಪ್ಪದೇ ಜಯವನ್ನೇ ಹೊಂದುವನೆಂದು ತಿಳಿಯಬೇಕು ಏಕೆಂದರೆ ?

ವೃ॥ದಳದುಳಿಗೈವನೀಂಬವರಕ್ಕೈತರೆಸಂದರೊಳೊಲ್ಮೆಯಿಂದಮಾ।
ಪೊಳಲಿರೆ ವಿಷ್ಣುಗುಪ್ತನಧಿಕಾರ ಪರಾಙ್ಮುಖನಾಗೆ ಮೌರ್ಯನೀ॥
ಗಳೆ ಪೊಸರಾಜನಾಗೆ ವಶನಾಗಿರೆ ನಾನುಂ (ಅರ್ಧೋಕ್ತಿಯಲ್ಲಿ ಲಜ್ಜೆಯನ್ನು ನಟಿಸುತ್ತಾ) ಉಪಾಯಮಾತ್ರಮಂ।
ತಿಳುಪುದರಿಂದೆ ನೀನೆಳಸುವಂತೆ ಫಲಂಗಳೆ ನೀವುದುದ್ಯಮಂ॥

ಮಲ—ಆರ್ಯನು ಇದೇ ದಂಡಯಾತ್ರಾಕಾಲವೆಂದು ತಿಳಿದಿದ್ದರೆ ಇನ್ನು ಸುಮ್ಮನಿರುವುದೇಕೆ ?

ವೃ॥ ಉನ್ನತಿವೆತ್ತುದಾನಜಲಮಂ ಸುರಿಸುತ್ತೆ ವಿನೀಲಮಾಗಿ ಭೋ। ರೆನ್ನುತೆ ಘೀಳಿಡುತ್ತೆರದದಿಂ ತಟಮಂ ಕಳಚುತ್ತೆ ಬಣ್ಣದಿಂ। ಚೆನ್ನೆಸೆವೀಗಜಂಗಳಿದೊ ಪೆರ್ಡಡದಂಬ ಜಗುಳ್ತತೀರನೀ॥ ಲೋನ್ನತ ಶಾಖಿಯೂರ್ಮಿಘನಘೋಷದ ಶೋಣನದಾಂಬುವೀಂಟುಗುಂ॥

ವೃತ್ತಂ॥ ಕಂ॥ ನೊಳಗುವ ಮುಗಿಲ್ಗಳ್ ವಿಂಧ್ಯಾ।
ಚಳಮಂ ಬಳಸುತ್ತೆ ವರ್ಷಿಪಂದದೊಳಿಭಸಂ॥
ಕುಳಮಿದು ಮದಜಳಮಿಶ್ರಿತ।
ಜಳಶೀಕರವೆರಚಿ ಬಳಸಲರಿ ಪಟ್ಟಣಮಂ॥

(ಎಂದು ಮಲಯಕೇತು ಭಾಗುರಾಯಣನೊಡನೆ ಹೊರಟುಹೋದನು)

ರಾಕ್ಷ—ಯಾರಲ್ಲಿ ?

ಪುರು—(ಪ್ರವೇಶಿಸಿ) ಅಮಾತ್ಯನಾಜ್ಞಾಪಿಸಬೇಕು.

ರಾಕ್ಷ—ಪ್ರಿಯಂವದಕನೆ ! ಬಾಗಿಲಲ್ಲಿ ಜೋಯಿಸನಾವನಾದರೂ ಇರುವನೆ?

ಪುರು—ಅಮಾತ್ಯನೆ ! ಈ ಜೋಯಿಸನು ಕ್ಷಪಣಕನು.

ರಾಕ್ಷ—(ಆತ್ಮಗತಂ ಅಪಶಕುನವನ್ನು ಸೂಚಿಸಿ) ಇದೇನು ? ಮೊದಲೇ ಕ್ಷಪಣಕನು.

ಪುರು—ಜೀವಸಿದ್ಧಿಯು.

ರಾಕ್ಷ—ಸೌಮ್ಯವೇಷವನ್ನಳವಡಿಸಿ ಕರೆದುಕೊಂಡುಬಾ.

ಪುರು—ಹಾಗೆಯೇ (ಎಂದು ಹೊರಟುಹೋದನು.)

ಕ್ಷಪ—(ಪ್ರವೇಶಿಸಿ)

ಕಂ|| ತಿಳಿದಪುದಬೋಧರೋಗವ |
ನಳಿಸುವ ವೈದ್ಯರೆನಿಪಾರ್ಹತರ ಶಾಸನಮಂ ||
ಗಳಿಲನೆ ಕಟುವಾದೊಡಮಾ |
ಬಳಿಕಾರುಪದೇಶಮೆಮಗೆ ಹಿತಕರಮುಕ್ಕುಂ ||

(ಬಳಿಗೆ ಬಂದು) ಶ್ರಾವಕರಿಗೆ ಧರ್ಮಸಿದ್ಧಿಯಾಗಲಿ.

ರಾಕ್ಷ—ಭದಂತನೆ! ನಮ್ಮ ಪ್ರಯಾಣಕ್ಕೆ ಒಂದು ದಿವಸವನ್ನು ಯೋಚಿಸು.

ಕ್ಷಪ—(ಯೋಚಿಸಿದಂತೆ ನಟಿಸಿ) ಶ್ರಾವಕನೆ! ಯೋಚಿಸಿದೆನು. ಈ ದಿನ ಮಧ್ಯಾಹ್ನದವರೆಗೂ ಸಕಲಶುಭಗಳನ್ನೂ ನಾಶಗೊಳಿಸುವ ಸಂಪೂರ್ಣ ಚಂದ್ರನುಳ್ಳ ಪೂರ್ಣಿಮಾ ತಿಥಿಯು. ಉತ್ತರದಿಂದ ದಕ್ಷಿಣಕ್ಕೆ ಪ್ರಯಾಣಮಾಡುವ ನಿಮಗೆ ನಕ್ಷತ್ರವೂ ಪ್ರತಿಕೂಲವಾಗಿರುವುದು. ಮತ್ತಂ,

ಕಂ|| ಮುಳುಗುತಿರಲ್ ದಿನಮಣಿ ಪು |
ಷ್ಕಳಮಂಡಳನೆನಿಪ ಚಂದಿರಂ ಮೂಡುತಿರಲ್ ||
ಖಳಕೇತು ಮೂಡಿ ಮುಳುಗಲ್ |
ತಳರ್ವುದು ಬುಧಲಗ್ನದೊಳ್ ಶುಭಾಸ್ಪದಮೆನಿಕುಂ ||

ರಾಕ್ಷ—ಭದಂತನೆ! ತಿಥಿಯೇ ಶುದ್ಧವಾಗಿಲ್ಲ.

ಕ್ಷಪ—ಶ್ರಾವಕನೆ!

ಕಂ|| ಗುಣವೊಂದೆ ತಿಥಿಯೊಳಿರ್ಪುದು |
ಗುಣಮದು ನಾಲ್ವಡಿಯೆನಿಪ್ಪುದೈ ತಾರಗೆಯೊಳ್ ||
ಎಣಿಸಲ್ ಲಗ್ನಕೆ ನಾನೂ |
ರ್ಗುಣಮಿರ್ಪುದಿದಲ್ತೆ ಜೋಯಿಸರ ಸಿದ್ಧಾಂತಂ ||

ಆದುದರಿಂದ, ಕಂ॥ ಸುಲಲಿತ ಸೌಮ್ಯಗ್ರಹ ಮುದು।
ನೆಲಸಿರೆ ದುರ್ಲಗ್ನಮುಂ ಸುಲಗ್ನಮೆನಿಕ್ಕುಂ॥
ಕಲಿಯೇ! ಲಾಲಿಸು ಚಂದ್ರನ।
ಬಲದಿಂ ನಡೆವಂಗೆ ದೀರ್ಘಸಿದ್ಧಿಯು ನೀಗುಂ॥

ರಾಕ್ಷ—ಭದಂತನೆ! ಬೇರೆ ಜೋಯಿಸರನ್ನು ಒಪ್ಪಿಸು.

ಕ್ಷಪ—ಶ್ರಾವಕನೇ ಒಪ್ಪಿಸಲಿ. ನಾನು ಹೊರಡುವೆನು.

ರಾಕ್ಷ—ಭದಂತನು ಕೋಪಗೊಳ್ಳಲಿಲ್ಲವಷ್ಟೆ!

ಕ್ಷಪ—ನಿಮ್ಮಲ್ಲಿ ಭದಂತನಿಗೆ ಕೋಪವಿಲ್ಲ.

ರಾಕ್ಷ—ಮತ್ತಾರಿಗೆ?

ಕ್ಷಪ—ಸ್ವಪಕ್ಷವನ್ನು ಬಿಟ್ಟು ಪರಪಕ್ಷವನ್ನು ಪ್ರಮಾಣೀಕರಿಸುವ ನಿಮ್ಮಲ್ಲಿ ಭಗವಂತನಾದ ಕೃತಾಂತನಿಗೆ. (ಎಂದು ಹೊರಟುಹೋದನು.)

ರಾಕ್ಷ—ಪ್ರಿಯುವಂದಕನೆ! ಹೊತ್ತೆಷ್ಟಾಗಿರುವುದು? ನೋಡು.

ಪುರು—ಭಗವಂತನಾದ ಸೂರ್ಯನು ಅಸ್ತಾಭಿಲಾಷಿಯಾಗಿರುವನು.

ರಾಕ್ಷ—(ಎದ್ದುನೋಡಿ) ಭಗವಂತನಾದ ಭಾಸ್ಕರನು ಅಸ್ತಾಭಿಮುಖನಾಗಿರುವನು. ಈಗಲಾದರೆ,

ವೃ॥ ಉದಯುಮುನೆಯ್ದೆ ಮಿತ್ರನಸುರಾಗದೆ ತೋಂಟದ ಪೆರ್ಮರಂಗಳಂ। ದೊದವಿದ ತಣ್ನೆಳಲ್ನೆವದೆ ಮುಂಗಡೆಯೋಡುತ ಮಾತನಸ್ತಕ್ಕೈ॥ ದಿದೊಡನೆ ಪಿಂದಿರುಂಗಿದುವು ನೋಡಲಿದಂ ವಿಭವಂಗಳಂತವೊಲ್। ದಿದ ಬಳಿಕಾಣ್ಮನಂ ಬಹುಳವಾಗಿಯೆ ಬಿಟ್ಟಪರಲ್ತೆ ಸೇವಕರ್॥

(ಎಂದೆಲ್ಲರೂ ತೆರಳಿದರು.)

## —— ಚತುರ್ಥಾಂಕಂ ಸಮಾಪ್ತಂ ——



# ಪಂಚಮಾಂಕಂ

(ಅನಂತರದಲ್ಲಿ ಸಿದ್ಧಾರ್ಥಕನು ಮುದ್ರಿತವಾದ ಕಾಗದವನ್ನೂ, ಒಡವೆಗಳ ಪೆಟ್ಟಿಗೆಯನ್ನೂ ತೆಗೆದುಕೊಂಡು ಪ್ರವೇಶಿಸುವನು)

ಸಿದ್ಧಾ—ಆಶ್ಚರ್ಯಂ! ಆಶ್ಚರ್ಯಂ!

ಕಂ॥ ಮನವೆಂಬಜಲದೆ ತುಂಬಿದ।
ಘನಮೆನಿಸಿದದೇಶಕಾಲಕಲಶಗಳಿಂ ಸೇ॥
ಚನಮಂಪಡೆದಿಹ ಚಾಣ।
ಕ್ಯನನೀತಿಯುಬಳ್ಳಿ ಬಹುಳಫಲಮಂ ಕುಡುಗುಂ॥

ಆದುದರಿಂದ ಆರ್ಯಚಾಣಕ್ಯನು ಮೊದಲು ಬರೆದ ಅಮಾತ್ಯರಾಕ್ಷಸ ಮುದ್ರಾಂಕಿತವಾದ ಈ ಲೇಖವನ್ನು ತೆಗೆದುಕೊಂಡೆನು. ಈ ಒಡವೆಗಳ ಪೆಟ್ಟಿಗೆಯೂ ಆತನ ಮುದ್ರೆಯಿಂದಲೇ ಮುದ್ರಿತವಾಗಿರುವುದು. ನಾನು ಪಾಟಲೀಪುರಕ್ಕೆ ಹೊರಟಿರುವೆನಷ್ಟೆ. ಹೋಗುವೆನು, (ಎಂದು ನಡೆದುನೋಡಿ) ಇದೇನು ಕ್ಷಪಣಕನು ಬರುತ್ತಿರುವನು? ಇವನನ್ನು ನೋಡುವುದು ಅಪಶಕುನವಾದರೂ ನನಗೆ ಸಮ್ಮತವೇ. ಆದುದರಿಂದ ನಾನು ತಪ್ಪಿಸಿಕೊಳ್ಳುವುದಿಲ್ಲ.

ಕ್ಷಪಣಕಂ—(ಪ್ರವೇಶಿಸಿ)

ಕಂ॥ ಮತಿಗಾಂಭೀರ್ಯದೊಳಾರೀ।
ಕ್ಷಿತಿಯೊಳ್ ಲೋಕೋತ್ತರಂಗಳಹ ಮಾರ್ಗಗಳಿಂ॥
ಹಿತಸಿದ್ಧಿಯನಾಂತರೊ ಸ।
ನ್ನುತಿವಡೆದಾ ಅರ್ಹತರ್ಗೆ ನಮಿಸುವೆ ನೊಲಪಿಂ॥

ಸಿದ್ಧಾ—ಭದಂತನೆ! ವಂದಿಸುವೆನು.

ಕ್ಷಪ—ಶ್ರಾವಕನೆ! ಧರ್ಮಸಿದ್ಧಿಯಾಗಲಿ. (ಎಂದುನೋಡಿ) ಶ್ರಾವಕನೆ! ನಿನ್ನನ್ನು ನೋಡಿದರೆ ಪ್ರಯಾಣಕ್ಕೆ ಸನ್ನಾಹವನ್ನು ಮಾಡಿರುವಂತೆ ತೋರುವುದು.

ಸಿದ್ಧಾ—ಭದಂತನಿಗೆ ಹೇಗೆ ತಿಳಿಯಿತು?

ಕ್ಷಪ—ಶ್ರಾವಕನೆ! ಇಲ್ಲಿ ತಿಳಿಯತಕ್ಕದೇನು? ನೀನು ದಾರಿಯಲ್ಲಿ ನೋಡುವ ಶಕುನವು, ನಿನ್ನ ಕೈಯಲ್ಲಿರುವ ಕಾಗದವು-ಇವುಗಳೇ ಸೂಚಿಸುತ್ತಿರುವುವು.

ಸಿದ್ಧಾ—ಭದಂತನಿಗೆ ತಿಳಿಯಿತು. ದೇಶಾಂತರಕ್ಕೆ ಹೊರಟಿರುವೆನು. ಇಂದು ದಿವಸವು ಹೇಗಿರುವುದು?

ಕ್ಷಪ—(ನಕ್ಕು) ಶ್ರಾವಕನೆ! ತಲೆಯನ್ನು ಬೋಳಿಸಿಕೊಂಡು ನಕ್ಷತ್ರಗಳನ್ನು ಕೇಳುವೆಯಲ್ಲಾ.

ಸಿದ್ಧಾ—ಭದಂತನೆ! ಈಗತಾನೇ ಏನಾಯಿತು? ಹೇಳು. ಪ್ರಯಾಣಕ್ಕೆ ಅನುಕೂಲವಾಗಿದ್ದರೆ ಹೊರಡುವೆನು.

ಕ್ಷಪ—ಶ್ರಾವಕನೆ! ಈಗ ಮಲಯಕೇತುವಿನ ಶಿಬಿರದಲ್ಲಿ ಅನುಕೂಲ ವಾಗುವುದಿಲ್ಲ.

ಸಿದ್ಧಾ—ಭದಂತನೆ! ಅದೇಕೆ? ಹೇಳು.

ಕ್ಷಪ—ಶ್ರಾವಕನೆ! ಕೇಳು. ಮೊದಲೀ ಶಿಬಿರದಲ್ಲಿ ಜನರು ತಡೆಯಿಲ್ಲದೆ ಹೋಗಿಬರುತ್ತಿದ್ದರು. ಈಗ ಕುಸುಮಪುರವು ಸಮೀಪಿಸುತ್ತಾ ಬರಲು ಉಂಡಿಗೆಯಿಲ್ಲದೆ ಹೋಗುವುದಕ್ಕಾಗಲಿ ಬರುವುದಕ್ಕಾಗಲಿ ಯಾರಿಗೂ ಅಪ್ಪಣೆಯಿಲ್ಲ. ಆದುದರಿಂದ ಭಾಗುರಾಯಣನಲ್ಲಿ ಉಂಡಿಗೆಯನ್ನು ಪಡೆದಿದ್ದರೆ ಹೊರಡು. ಇಲ್ಲವಾದರೆ ನೆಮ್ಮದಿಯಾಗಿರು. ಉಕ್ಕಡ ದವರಿಂದ ಕೈಕಾಲುಗಳನ್ನು ಬಿಗಿಸಿಕೊಂಡು ಚಾವಡಿಗೆ ಹೋಗಬೇಡ.

ಸಿದ್ಧಾ—ನಾನು ಅಮಾತ್ಯರಾಕ್ಷಸನ ಸನ್ನಿಧಿಯ ಸೇವಕನೆಂದು ಭದಂತನಿಗೆ ತಿಳಿಯದೆ? ಆದುದರಿಂದ ನಾನು ಉಂಡಿಗೆಯಿಲ್ಲದೆ ಹೋದರೂ ನನ್ನನ್ನು ತಡೆಯುವುದಕ್ಕೆ ಯಾರಿಗೆ ಶಕ್ತಿಯುಂಟು?

ಕ್ಷಪ—ಶ್ರಾವಕನೆ! ರಾಕ್ಷಸನ ಕಡೆಯವನಾಗು, ಅಥವಾ ಪಿಶಾಚನ ಕಡೆಯವನಾಗು. ಉಂಡಿಗೆಯಿಲ್ಲದವನಿಗೆ ಇಲ್ಲಿಂದ ಹೊರಡಲು ಉಪಾಯವಿಲ್ಲ.

ಸಿದ್ಧಾ—ಭದಂತನೆ! ಕೋಪಿಸಬೇಡ. ಕಾರ್ಯಸಿದ್ಧಿಯಾಗಲಿ.

ಕ್ಷಪ—ಶ್ರಾವಕನೆ! ಹೊರಡು. ನಿನ್ನ ಕಾರ್ಯವು ಜಯಿಸಲಿ. ನಾನೂ ಭಾಗುರಾಯಣನಲ್ಲಿ ಉಂಡಿಗೆಯನ್ನು ಬೇಡುವೆನು.

(ಎಂದಿಬ್ಬರೂ ಹೊರಟುಹೋಗುವರು)

(ಪ್ರವೇಶಕಂ)

(ಅನಂತರದಲ್ಲಿ ಸೇವಕನನ್ನು ಹಿಂದಿಟ್ಟುಕೊಂಡು ಭಾಗುರಾಯಣನು ಪ್ರವೇಶಿಸುವನು.)

ಭಾಗು—(ಆತ್ಮಗತಂ) ಅಹಾ! ಆರ್ಯಚಾಣಕ್ಯನ ನೀತಿಯು ಎಷ್ಟು ಚಿತ್ರವಾದುದು?

ಕಂ|| ಅಡಿಗಡಿಗಂ ತಲೆದೋರು |
ತ್ತಡಿಗಡಿಗಾ ವಿಷಯ ವಳಿವುದರಿ ನರಿಕೆನಿಸು ||
ತ್ತಡಿಗಡಿಗೆ ಪೂರ್ಣವಾಗು |
ತ್ತಡಿಗಡಿಗಂ ಕಾರ್ಯವಶದೆ ಬಡವಾಗುತ್ತಂ ||
ಅಡಿಗಡಿಗೆ ಬೀಜವಳಿಸು |
ತ್ತಡಿಗಡಿಗೆ ಸಮಗ್ರಫಲವ ತೋರುತ್ತೆಸೆಯಲ್ ||
ಗಡ! ಚಾಣಕ್ಯನ ನಯಮಿದು |
ಪೊಡವಿಯೊಳತಿ ಚಿತ್ರವಲ್ತೆ! ನಿಯತಿಯ ತೆರದಿಂ ||

(ಪ್ರಕಾಶಂ) ಭದ್ರಭಾಸುರಕನೆ! ನಾನು ದೂರವಾಗಿರುವುದಕ್ಕೆ ಕುಮಾರ ನೊಪ್ಪುವುದಿಲ್ಲ. ಆದುದರಿಂದ ಈ ಸಭಾಮಂಟಪದಲ್ಲಿಯೇ ಪೀಠವನ್ನು ಸಜ್ಜುಗೊಳಿಸು.

**ಪುರು**—ಇದೋ, ಆಸನವು. ಆರ್ಯನು ಕುಳಿತುಕೊಳ್ಳಬೇಕು.

**ಭಾಗು**—(ಕುಳಿತುಕೊಂಡಂತೆ ನಟಿಸಿ)

ಭದ್ರಭಾಸುರಕನೆ! ಯಾವನಾದರೂ ಉಂಡಿಗೆಗಾಗಿ ನನ್ನನ್ನು ನೋಡ ಬೇಕೆಂದು ಬಂದರೆ ಅವನನ್ನು ಒಳಕ್ಕೆ ಬಿಡು.

**ಪುರು**—ಆರ್ಯನಾಜ್ಞೆಯಂತಾಗಲಿ (ಎಂದು ಹೊರಟುಹೋದನು.)

**ಭಾಗು**—(ಸ್ವಗತಂ) ಅಕಟಾ! ಇಂತು ನಮ್ಮನ್ನು ನಂಬಿದ್ದರೂ ಕುಮಾರ ನಾದ ಮಲಯಕೇತುವನ್ನು ವಂಚಿಸಬೇಕೆಂಬುದು ಮಹಾಪಾತಕವೇ ಸರಿ. ಅಥವಾ

ಕಂ|| ಕುಲಕೀರ್ತಿ ಮಾನಲಜ್ಜೆಗ |
ಳಳಿದಾಸೆಯೊಳಾತ್ಮತನುವ ಮಾರುತೆ ಧನಿಕಂ ||
ಗೊಳಗಾಗಿಹ ಪರತಂತ್ರಂ |
ಗಿಳೆಯೊಳ್ ಹಿತಮುಹಿತಮೆಂದು ಯೋಚಿಸಲಳವೇಂ ||

(ಅನಂತರದಲ್ಲಿ ಕಂಚುಕಿಯನ್ನು ಹಿಂದಿಟ್ಟುಕೊಂಡು ಮಲಯಕೇತು ಬರುವನು.)

**ಮಲ**—(ಆತ್ಮ) ಆಹಾ! ರಾಕ್ಷಸನನ್ನು ಕುರಿತು ವಿಕಲ್ಪಬಾಹುಳ್ಯದಿಂದ ಬಳಲುತ್ತಿರುವ ನನ್ನ ಬುದ್ಧಿಯು ನಿಶ್ಚಯವನ್ನೇ ತಿಳಿಯದಿರುವುದು.

ವೃ|| ನಂದಕುಲಾನುರಕ್ತಿ ದೃಢಭಕ್ತಿಗಳಿಂ ಮಟುವಿಷ್ಣುಗುಪ್ತ ನಿಂ | ನಿಂದಿತನಾದ ನಂದಕುಲಮಾರ್ಯನನೊಂದುತೆ ಸಂಧಿಗೊಳ್ವನೊ || ಕುಂದದ ನನ್ನ ಭಕ್ತಿಗುಣಮಂ ಗಣಿ ಸುತ್ತವೆ ಸತ್ಯವಾಂಪನೋ | ಎಂದು ಕುಲಾಲಚಕ್ರಮ ನಡರ್ದವೊಲಿರ್ದಪುದೆನ್ನ ಮಾನಸಂ ||

ಪ್ರತಿಹಾ—ವಿಜಯೆ! ಭಾಗುರಾಯಣನೆಲ್ಲಿ?

ಪ್ರತಿಹಾ—ಕುಮಾರನೇ! ಈತನು ಶಿಬಿರದಿಂದ ಹೊರಡತಕ್ಕವರಿಗೆ ಉಂಡಿಗೆ ಗಳನ್ನು ಕೊಡುತ್ತಿರುವನು.

ಮಲ—ವಿಜಯೆ! ಒಂದುಗಳಿಗೆ ಓಡಾಡದಿರು. ನಾನು ಹಿಂದುಗಡೆ ಯಿಂದಲೇ ಹೋಗಿ ಕೈಗಳಿಂದ ಇವನ ಕಣ್ಣುಗಳನ್ನು ಮುಚ್ಚುವೆನು.

ಪ್ರತಿಹಾ—ಕುಮಾರನಾಜ್ಞೆಯಂತಾಗಲಿ.

ಪುರು—(ಪ್ರವೇಶಿಸಿ) ಆರ್ಯನೆ! ಈ ಕ್ಷಪಣಕನು ಉಂಡಿಗೆಗಾಗಿ ಆರ್ಯ ನನ್ನು ನೋಡಲಪೇಕ್ಷಿಸುವನು.

ಭಾಗು—ಒಳಕ್ಕೆಬಿಡು.

ಪುರು—ಹಾಗೆ (ಎಂದು ಹೊರಟುಹೋದನು)

ಕ್ಷಪ—(ಪ್ರವೇಶಿಸಿ) ಶ್ರಾವಕರಿಗೆ ಧರ್ಮಸಿದ್ಧಿಯಾಗಲಿ.

ಭಾಗು—(ನೋಡಿದಂತೆ ನಟಿಸಿ) ಇವನು ರಾಕ್ಷಸನ ಮಿತ್ರನಾದ ಜೀವಸಿದ್ಧಿಯು. (ಪ್ರಕಾಶ) ಭದಂತನೆ! ರಾಕ್ಷಸನ ಯಾವುದಾದರೂ ಪ್ರಯೋಜನಕ್ಕಾಗಿ ಹೊರಡುವುದಿಲ್ಲವಷ್ಟೆ?

(ಶಿವ-ಶಿವ) ಶ್ರಾವಕನೆ! ರಾಕ್ಷಸನದಾಗಲಿ, ಪಿಶಾಚನದಾಗಲಿ ಹೆಸರು ಕೂಡ ಎಲ್ಲಿ ಕೇಳಬರುವುದಿಲ್ಲವೊ, ಅಲ್ಲಿಗೆ ಹೋಗುವೆನು.

ಭಾಗು—ಮಿತ್ರನಲ್ಲಿ ಪ್ರಣಯಕೋಪವು ಬಲವಾಗಿರುವುದು. ಆದರೆ ಭದಂತನಿಗೆ ರಾಕ್ಷಸನೇನಪರಾಧವನ್ನು ಮಾಡಿದನು?

ಕ್ಷಪ—ಶ್ರಾವಕನೆ! ರಾಕ್ಷಸನು ನನಗೇನೂ ಅಪರಾಧವನ್ನು ಮಾಡಲಿಲ್ಲ. ಆದರೆ ನಿರ್ಭಾಗ್ಯನಾದ ನಾನೇ ನನ್ನ ಕೆಲಸಗಳಿಗಾಗಿ ನಾಚುತ್ತಿರುವೆನು.

ಭಾಗು—ಭದಂತನೆ! ನನ್ನ ಕುತೂಹಲವನ್ನು ಹೆಚ್ಚಿಸುತ್ತಿರುವೆ. ಕೇಳ ಲಪೇಕ್ಷಿಸುವೆನು.

ಮಲ—(ಸ್ವಗತಂ) ನಾನೂ ಕೇಳಲಪೇಕ್ಷಿಸುವೆನು.

ಕ್ಷಪ—ಶ್ರಾವಕನೆ! ಈ ಕೇಳಬಾರದುದನ್ನು ಕೇಳಿದುದರಿಂದೇನು?

ಭಾಗು—ರಹಸ್ಯವಾದರೆ ನಿನ್ನಲ್ಲಿಯೇ ಇರಲಿ.

ಕ್ಷಪ—ಶ್ರಾವಕನೆ! ರಹಸ್ಯವೇನೂ ಅಲ್ಲ. ಬಹಳ ಜುಗುಪ್ಸಿತವಾದುದು.

ಭಾಗು—ರಹಸ್ಯವಲ್ಲದಿದ್ದರೆ ಹೇಳೋಣವಾಗಲಿ.

ಕ್ಷಪ—ಶ್ರಾವಕನೆ! ಇದು ರಹಸ್ಯವಲ್ಲ. ಆದರೂ ಹೇಳಲಾರೆನು.

ಭಾಗು—ಆದರೆ ನಾನು ಉಂಡಿಗೆಯನ್ನು ಕೊಡುವದಿಲ್ಲ.

ಕ್ಷಪ—(ಸ್ವಗತಂ) ಕೇಳಿಸಿಕೊಂಡು ಈಗ ಹೇಳುವುದು ಯುಕ್ತವಾಗಿರುವದು. (ಪ್ರಕಾಶಂ) ಏನುಗತಿ? ಇದೊ ಹೇಳುವೆನು. ಶ್ರಾವಕನು ಕೇಳಬಹುದು. ಮಂದಭಾಗ್ಯನಾದ ನಾನು ಮೊದಲು ಪಾಟಲೀಪುರದಲ್ಲಿ ವಾಸಮಾಡಿಕೊಂಡು ರಾಕ್ಷಸನೊಡನೆ ಮೈತ್ರಿಯನ್ನು ಪಡೆದನು. ಅದೇ ಕಾಲದಲ್ಲಿ ರಾಕ್ಷಸನು ರಹಸ್ಯವಾಗಿ ವಿಷಕನ್ಯಾಪ್ರಯೋಗದಿಂದ ಸ್ವಾಮಿಯಾದ ಪರ್ವತೇಶ್ವರನನ್ನು ಕೊಲ್ಲಿಸಿದನು.

ಮಲ—(ಕಂಬನಿಗರೆದು ಆತ್ಮಗತಂ) ಹೇಗೆ? ತಂದೆಯನ್ನು ಕೊಲ್ಲಿಸಿದವನು ರಾಕ್ಷಸನೇ? ಚಾಣಕ್ಯನಲ್ಲವೆ?

ಭಾಗು—ಭದಂತ! ಆಮೇಲಾಮೇಲೆ?

ಕ್ಷಪ—ಆಮೇಲೆ ನಾನು ರಾಕ್ಷಸನಿಗೆ ಮಿತ್ರನೆಂದು ತಿಳಿದು ಆ ಚಾಣಕ್ಯ ಹತಕನು ನನ್ನನ್ನು ಅವಮಾನಗೊಳಿಸಿ ಪಟ್ಟಣದಿಂದ ಹೊರಡಿಸಿದನು. ಬಹುಕಾರ್ಯಕುಶಲನಾದ ರಾಕ್ಷಸನು ಈಗಲೂ ಅಂತಹ ಮತ್ತೊಂದು ಕಾರ್ಯವನ್ನು ಪ್ರಾರಂಭಿಸಿರುವನು. ಅದರಿಂದ ನಾನು ಈ ಜೀವ ಲೋಕದಿಂದಲೇ ಹೊರಡಿಸಲ್ಪಡಬೇಕಾಗುವುದು.

ಭಾಗು—ಭದಂತನೆ! ಪ್ರತಿಜ್ಞೆಯಮೇರಿಗೆ ಅರ್ಧರಾಜ್ಯವನ್ನು ಕೊಡಲಾರದ ಚಾಣಕ್ಯಹತಕನೀದುಷ್ಕಾರ್ಯವನ್ನು ಮಾಡಿದನು. ರಾಕ್ಷಸನಲ್ಲ-ಎಂದು ನಾವು ಕೇಳಿರುವೆವಲ್ಲಾ?

ಕ್ಷಪ—(ಕಿವಿಗಳನ್ನು ಮುಚ್ಚಿಕೊಂಡು) ಶಿವ-ಶಿವ ಚಾಣಕ್ಯನು ವಿಷಕನ್ಯೆಯ ಹೆಸರನ್ನು ಕೂಡ ಕೇಳಿದವನಲ್ಲ.

ಭಾಗು—ಉಂಡಿಗೆಯನ್ನು ಕೊಡುತ್ತೇನೆ. ಬಾ. ಕುಮಾರನಿಗೆ ಹೇಳು.

ಮಲ—(ಬಳಿಗೆಬಂದು)

ಕಂ|| ಮಿತ್ರನೆ ಕೇಳ್ದೆಂ ಕಿವಿಗೆ ಲ|
ವಿತ್ರವಮ ನರಿಕೃತವು ನಿಂದು ಮಿತ್ರನ ಮುಖದಿಂ||
ದ್ವಿತ್ರಿಗುಣವೆನಿಸಿ ಸುಡುವದೊ|
ಗಾತ್ರವು ನಾವಳಲದಿಂತು ಪಿತೃವಧ ಜನಿತಂ||

ಕ್ಷಪಣ—(ಸ್ವಗತಂ) ಓಹೋ! ಮಲಯಕೇತು ಹತಕನು ಕೇಳಿದನು. ಭಾಪು! ಕೃತಾರ್ಥನಾದೆನು. (ಎಂದು ಹೊರಟುಹೋದನು.)

ಮಲ—(ಆಕಾಶದಲ್ಲಿ ಪ್ರತ್ಯಕ್ಷವಾದಂತೆ ಲಕ್ಷ್ಯವಿಟ್ಟು) ರಾಕ್ಷಸ! ರಾಕ್ಷಸ! ಯುಕ್ತ. ಯುಕ್ತ.

ವೃ|| ಎನಗೀತಂ ಸಖನೆಂಬ ನಂಬುಗೆಯೊಳಾ ರಾಜ್ಯಾದಿ ಸರ್ವಸ್ವಮಂ| ನಿನಗಿತ್ತೊಲ್ಮೆಯೊಳಿರ್ದ ತಾತನನೆ ಬಂಧು ಮಿತ್ರ ನೇತ್ರಾಂಬು ಪಾ| ತನದಿಂ ಕೂಡೆ ನಿಪಾತವಾಗಿಸಿದುದಂ ನಾಂ ಯೋಚಿಸಲ್ಕೀಗ ಜಾ|| ಲ್ಮನೆ ನೀಂ ರಾಕ್ಷಸನೇ ದಿಟಂ ಪೆಸರಿದುಂ ಸಾರ್ಥಂಗಡಾ! ರಾಕ್ಷಸಾ! ||

ಭಾಗು—(ಸ್ವಗತಂ) ರಾಕ್ಷಸನ ಪ್ರಾಣಗಳನ್ನು ರಕ್ಷಿಸಬೇಕೆಂದು ಆರ್ಯನಾಜ್ಞೆಯು. ಒಳ್ಳೆಯದಾಗಲಿ. (ಪ್ರಕಾಶಂ) ಕುಮಾರನೆ! ಚಿಂತಿಸಬೇಡ, ಕುಮಾರನು ಪೀಠದಲ್ಲಿ ಕುಳಿತುಕೊಂಡರೆ ಕೊಂಚ ವಿಜ್ಞಾಪಿಸಬೇಕೆಂದಿರುವೆನು.

ಮಲ—(ಕುಳಿತುಕೊಂಡು) ಮಿತ್ರನೆ! ಏನನ್ನು ಹೇಳಬೇಕೆಂದಿರುವೆ?

ಭಾಗು—ಕುಮಾರನೆ! ಈ ಲೋಕದಲ್ಲಿ ಶತ್ರುಗಳು, ಮಿತ್ರರು, ಉದಾಸೀನರು ಎಂಬ ಅರ್ಥಶಾಸ್ತ್ರವ್ಯವಹಾರಿಗಳ ವ್ಯವಸ್ಥೆಯು ಪ್ರಯೋಜನಾಪೇಕ್ಷೆಯಿಂದಲ್ಲದೆ ಲೌಕಿಕರಂತೆ ಸ್ವೇಚ್ಛೆಯಿಂದಲ್ಲ. ಏಕೆಂದರೆ? ಆ ಕಾಲದಲ್ಲಿ ಸರ್ವಾರ್ಥಸಿದ್ಧಿಯನ್ನು ರಾಜನನ್ನಾಗಿ ಮಾಡಬೇಕೆಂದಿದ್ದ ರಾಕ್ಷಸನಿಗೆ, ಚಂದ್ರಗುಪ್ತನಿಗಿಂತಲೂ ಬಲಿಷ್ಠನಾಗಿ ಪ್ರಖ್ಯಾತನೆನಿಸಿದ ಸ್ವಾಮಿಯಾದ ಪರ್ವತೇಶ್ವರನೇ ರಾಜ್ಯಾರ್ಧಹಾರಿಯಾದ ಮಹಾ ಶತ್ರುವಾಗಿದ್ದನು. ಆತನಲ್ಲಿ ರಾಕ್ಷಸನು ಇದನ್ನು ನಡೆಯಿಸಿದನು. ಆದುದರಿಂದ ಇವನಲ್ಲಿ ದೋಷವೇನೂ ನನಗೆ ತೋರುವುದಿಲ್ಲ. ಕುಮಾರನೇ! ನೋಡು.

ಕಂ|| ಪಗೆಗೊಳಿಪುದು ನೇಹಿಗರೊಳ್ |
ಪಗೆಗಳೊಳಂ ನೇಹಗೊಳಿಕು ಮರ್ಥದೆ ನಯಮಂ ||
ಬಗೆಯಲ್ ಮುಂನಡೆವಳಿಯುಂ |
ಬಗೆಯದ ಬೇರೊಡಲ ನಾಂಪ ನಳಿಯದೆ ಪುರುಷಂ ||

ಆದುದರಿಂದ, ಈ ವಿಷಯದಲ್ಲಿ ರಾಕ್ಷಸನನ್ನು ನಿಂದಿಸತಕ್ಕುದಲ್ಲ. ನಂದರಾಜ್ಯವು ದೊರೆಯುವ ವರೆಗೂ ಇಟ್ಟುಕೊಂಡಿರಬೇಕು. ಆಮೇಲೆ ಇಟ್ಟುಕೊಳ್ಳುವುದಕ್ಕೂ ಬಿಡುವುದಕ್ಕೂ ಕುಮಾರನ ಇಷ್ಟವಿದ್ದಂತಾಗಲಿ.

ಮಲ—ಮಿತ್ರನೆ! ಚೆನ್ನಾಗಿ ಯೋಚಿಸಿ ಹೇಳಿದೆ. ಹೀಗೆಯೇ ಸರಿ. ಮಂತ್ರಿಯನ್ನು ಸಂಹರಿಸಿದಲ್ಲಿ ಪ್ರಜಾಕ್ಷೋಭೆಯುಂಟಾಗುವುದು. ಹೀಗಾದಲ್ಲಿ ನಮಗೆ ಜಯವು ಸಂದಿಗ್ಧವಾಗುವುದು.

ಪುರು—(ಪ್ರವೇಶಿಸಿ) ಕುಮಾರನಿಗೆ ಜಯವಾಗಲಿ ಆರ್ಯನೆ! ಗುಲ್ಮಾಧಿಕಾರಿಯಾದ ದೀರ್ಘರಕ್ಷನು "ಉಂಡಿಗೆಯಿಲ್ಲದೆ ಕಾಗದವನ್ನು ತೆಗೆದುಕೊಂಡು ಪಾಳೆಯದಿಂದ ಹೊರಗೆ ಹೋಗುತ್ತಿದ್ದ ಈ ಪುರುಷನನ್ನು

ಹಿಡಿದುತಂದಿರುವೆವು. ಆರ್ಯನು ಪರಾಮರಿಸಬೇಕೆಂದು" ಎಂದು ಬಿನ್ನವಿಸುವನು.

ಭಾಗು—ಭದ್ರನೆ! ಕರೆದುಕೊಂಡು ಬಾ.

(ಅನಂತರದಲ್ಲಿ ಸಂಯಮಿತನಾದ ಸಿದ್ಧಾರ್ಥಕನು ಪುರುಷನೊಡನೆ ಪ್ರವೇಶಿಸುವನು.)

ಸಿದ್ಧಾ—(ಸ್ವಗತಂ)

ಕಂ|| ಗುಣಮಂ ಸಮನಿಸಿ ದೋಷ|
ಕ್ಕಣಿಗೊಳಿಸದೆ ಪಿಂದಿರುಂಗಿಸುತೆ ನೇಹದೆ ಧಾ||
ರಿಣಿಯೊಳ್ ಮಾದೃಶಜನ ಪೋ|
ಷಣೆಗೈವ ಸ್ವಾಮಿಭಕ್ತಿಗೆರಗುವೆ ನೊಲವಿಂ||

ಪುರು—ಆರ್ಯನೆ! ಇವನೇ ಆ ಪುರುಷನು.

ಭಾಗು—(ನೋಡಿ) ಇವನು ಆಗಂತುಕನೊ? ಅಥವಾ ಇಲ್ಲಿಯೇ ಯಾರ ಮನೆಯಲ್ಲಿಯಾದರೂ ಇರುವವನೊ?

ಸಿದ್ಧಾ—ಆರ್ಯನೆ? ನಾನು ಅಮಾತ್ಯರಾಕ್ಷಸನ ಸೇವಕನಲ್ಲವೆ?

ಭಾಗು—ಓಹೋ! ಭದ್ರನೆ! ಆದರೆ ಉಂಡಿಗೆಯನ್ನು ಪಡೆಯದೆ ಪಾಳಯದಿಂದೇಕೆ ಹೊರಟೆ?

ಸಿದ್ಧಾ—ಆರ್ಯನೆ! ಕಾರ್ಯಗೌರವದಿಂದ ದುಡುಕಿದೆನು.

ಭಾಗು—ರಾಜಾಜ್ಞೆಯನ್ನು ಕೂಡ ಅತಿಕ್ರಮಿಸುವಂತಹ ಕಾರ್ಯಗೌರವವೇನು?

ಮಲ—ಮಿತ್ರ ಭಾಗುರಾಯಣನೆ! ಕಾಗದವನ್ನು ತೆಗೆದುಕೊ.

ಭಾಗು—(ಸಿದ್ಧಾರ್ಥಕನ ಕೈಯಿಂದ ಕಾಗದವನ್ನು ತೆಗೆದುಕೊಂಡು ಮೇಲಣ ಮುದ್ರೆಯನ್ನು ನೋಡಿ) ಕುಮಾರನೆ! ಇದೋ ಕಾಗದವು. ಇದು ರಾಕ್ಷಸನ ನಾಮಾಂಕಿತವಾದ ಮುದ್ರೆಯು.

ಮಲ—ಮುದ್ರೆಯು ಕೆಡದಂತೆ ಬಿಚ್ಚಿ ತೋರಿಸು.

ಭಾಗು—(ಹಾಗೆ ಮಾಡಿ ತೋರಿಸುವನು.)

ಮಲ—ಓದುವನು.

ಉಭಯಕುಶಲೋಪರಿ.

ಎಲ್ಲಿಂದಲೋ ಒಬ್ಬನು ಮತ್ತೊಬ್ಬದೊಡ್ಡಮನುಷ್ಯನಿಗೆ ಶ್ರುತಪಡಿಸುವು ದೆಂತೆಂದರೆ, "ಸತ್ಯವಂತನು ನಮ್ಮ ಶತ್ರುಪಕ್ಷವನ್ನು ನಿರಾಕರಿಸಿ ಎಷ್ಟೋ ಸತ್ಯತೆಯನ್ನು ತೋರಿಸಿದಂತಾಯಿತು. ಮೊದಲೇ ಸಂಧಿ ಯನ್ನು ಮಾಡಿಕೊಂಡಿರುವ, ನಮ್ಮ ಮಿತ್ರರಾದ ಇವರಿಗೆ, ಈಗ ಮುನ್ನು ಮಾಡಿಕೊಟ್ಟ ಸಂಧಿನಿಬಂಧನದಂತೆ ಕೊಡತಕ್ಕದನ್ನು ಅವಶ್ಯ ವಾಗಿ ಕೊಡುವೆನೆಂದು ಈಗ ನಂಬುಗೆಗೊಳಿಸಿ, ಸತ್ಯವಂತನು ಪ್ರೀತಿಯ ನ್ನುಂಟುಮಾಡಬೇಕು. ಇವರೂ ಹೀಗೆ ಅನುಗ್ರಹವನ್ನು ಪಡೆದು, ತಮ್ಮ ಆಶ್ರಯವನ್ನು ವಿನಾಶಗೊಳಿಸಿ ಉಪಕಾರಿಯನ್ನು ಆಶ್ರಯಿ ಸುವರು. ಮರೆಯದಿದ್ದರೂ ಸತ್ಯವಂತನಿಗೆ ಇದನ್ನು ಜ್ಞಾಪಿಸುವೆನು. ಇವರೊಳಗೆ ಕೆಲವರು ಶತ್ರುವಿನ ಭಂಡಾರವನ್ನೂ, ಗಜಸೇನೆಯನ್ನೂ, ಮತ್ತೆ ಕೆಲವರು ರಾಜ್ಯವನ್ನೂ ಬಯಸುವರು. ಸತ್ಯವಂತನು ಕಳುಹಿಸಿ ಕೊಟ್ಟ ಅಲಂಕಾರತ್ರಯವೂ ಬಂದು ಸೇರಿತು. ನಾನೂ ಬರಿಗೈಯಿಂದ ಕಾಗದವನ್ನು ಕಳುಹಿಸಬಾರದೆಂದು ಕೊಂಚ ಕಳುಹಿಸಿರುವೆನು. ಅದನ್ನು ಒಪ್ಪಿಸಿಕೊಳ್ಳಬೇಕು. ಬಾಯಿಮಾತನ್ನು ಈ ಆಪ್ತನ ಮುಖದಿಂದ ಕೇಳಬೇಕು."

ಮಲ—ಭಾಗುರಾಯಣನೇ! ಇದೇನು ಕಾಗದವು?

ಭಾಗು—ಭದ್ರಸಿದ್ಧಾರ್ಥಕನೆ! ಇದು ಯಾರ ಕಾಗದವು?

ಸಿದ್ಧಾ—ಆರ್ಯನೇ! ನನಗೆ ತಿಳಿಯದು.

ಭಾಗು—ಧೂರ್ತನೆ! ಕಾಗದವನ್ನು ತೆಗೆದುಕೊಂಡು ಹೊರಟಿರುವೆ. ಯಾರ ದೆಂದು ತಿಳಿಯದೆ? ಅದೆಲ್ಲವೂ ಅಂತಿರಲಿ. ನೀನು ಯಾರಿಗೆ ಬಾಯಿಮಾತನ್ನು ಹೇಳಬೇಕು?

ಸಿದ್ಧಾ—(ಭಯವನ್ನು ನಟಿಸುತ್ತಾ) ನಿಮಗೆ.

ಭಾಗು—ಏನು ನಮಗೊ ?

ಸಿದ್ಧಾ—ನಿಮಗೆ ಸಿಕ್ಕಿದೆನಾದುದರಿಂದ ಏನನ್ನು ಹೇಳಬೇಕೋ ತಿಳಿಯದು.

ಭಾಗು—(ಕೋಪದಿಂದ) ಭಾಸುರಕನೆ! ಹೊರಗೆ ಕರೆದುಕೊಂಡು ಹೋಗಿ ಎಲ್ಲವನ್ನೂ ಹೇಳುವ ವರೆಗೂ ಇವನನ್ನು ಹೊಡಿ.

ಪುರು—ಆರ್ಯನಾಜ್ಞೆಯಂತಾಗಲಿ. (ಎಂದು ಅವನೊಡನೆ ಹೋಗಿ ತಿರುಗಿಬಂದು) ಆರ್ಯನೆ! ಈ ಮುದ್ರಾಂಕಿತವಾದ ಪೆಟ್ಟಿಗೆಯು ಅವನ ಕಂಕುಳಿಂದ ಬಿದ್ದಿತು,

ಭಾಗು—(ನೋಡಿದಂತೆ ನಟಿಸಿ) ಇದೂ ರಾಕ್ಷಸ ಮುದ್ರಾಂಕಿತವೇ.

ಮಲ—ಅಯ್ಯಾ! ಇದು ಬರಿಗೈಯಿಂದ ಕಾಗದವನ್ನು ಕಳುಹಿಸಬಾರ ದೆಂಬುದಿರಬಹುದು. ಇದನ್ನೂ ಮುದ್ರೆಯು ಕೆಡದಂತೆ ತೆರೆದು ತೋರಿಸು.

ಭಾಗು—(ಹಾಗೆ ಮಾಡಿತೋರಿಸುತ್ತಾನೆ.)

ಮಲ—(ನೋಡಿದಂತೆ ನಟಿಸಿ) ಅಯ್ಯಾ! ನನ್ನ ಶರೀರದಿಂದಲೇ ತೆಗೆದು ನಾನು ರಾಕ್ಷಸನಿಗೆ ಕಳುಹಿಸಿದ ಒಡವೆಗಳು ಇವೇ. ಇದು ಚಂದ್ರಗುಪ್ತನಿಗೆ ಕಳುಹಿದ ಕಾಗದವು. ವ್ಯಕ್ತವಾಯಿತು.

ಭಾಗು—ಕುಮಾರನೆ! ಈಗ ಸಂಶಯವು ನಿರ್ಣೀತವಾಗುವುದು. ಭದ್ರನೆ! ತಿರುಗಿ ಹೊಡಿ.

ಪುರು—ಹಾಗೆ (ಎಂದು ಹೋಗಿ ಮರಳಿ ಸಿದ್ಧಾರ್ಥಕನೊಡನೆ ಪ್ರವೇಶಿಸಿ) ಆರ್ಯನೆ! ಹೊಡಿಸಿಕೊಳ್ಳುವ ಇವನು ಕುಮಾರನಿಗೇ ವಿಜ್ಞಾಪಿಸುವೆನೆಂದು ಹೇಳುವನು.

ಮಲ—ಹಾಗೆಯೇ ಆಗಲಿ.

ಸಿದ್ಧಾ—(ಕಾಲಿಗೆರಗಿ) ಆರ್ಯನು ನನಗೆ ಅಭಯದಿಂದನುಗ್ರಹವನ್ನು ಮಾಡಬೇಕು.

ಮಲ—ಭದ್ರನೆ! ಪರಾಧೀನರಿಗೆ ಅಭಯುವೇ. ಇದ್ದುದನ್ನು ಇದ್ದಹಾಗೆಯೇ ತಿಳುಹಿಸು.

ಸಿದ್ಧಾ—ಕುಮಾರನು ಲಾಲಿಸಬೇಕು. ಅಮಾತ್ಯರಾಕ್ಷಸನು ಈ ಕಾಗದವನ್ನು ಕೊಟ್ಟು ನನ್ನನ್ನು ಚಂದ್ರಗುಪ್ತನ ಬಳಿಗೆ ಕಳುಹಿದನು.

ಮಲ—ಈಗ ಬಾಯಿಮಾತನ್ನು ಕೇಳಲಪೇಕ್ಷಿಸುವೆನು.

ಸಿದ್ಧಾ—ಕುಮಾರನೆ! ಅಮಾತ್ಯನು ನನಗೆ ಆಜ್ಞಾಪಿಸಿದುದು ಹೇಗೆಂದರೆ, "ಈ ನನ್ನ ಮಿತ್ರರಾದ ಕಲೂತಪತಿ ಚಿತ್ರವರ್ಮನೂ, ಮಲಯಾಧಿಪತಿ ಸಿಂಹನಾದನೂ, ಕಾಶ್ಮೀರಭೂಪಾಲ ಪುಷ್ಕರಾಕ್ಷನೂ, ಸಿಂಧುರಾಜನ್ಯ ಸಿಂಧುಷೇಣನೂ, ಪಾರಸೀನಾಯಕ ಮೇಘನಾದನು ಎಂಬ ಐವರು ರಾಜರೂ ಮೊದಲೇ ನಿನ್ನಲ್ಲಿ ಸ್ನೇಹವನ್ನು ಬೆಳೆಯಿಸಿ ಸಂಧಿಯನ್ನು ಮಾಡಿಕೊಂಡಿರುವುದು ಸರಿಯಷ್ಟೆ. ಅವರಲ್ಲಿ ಮೊದಲು ಹೇಳಿದ ಮೂವರು ಮಲಯಕೇತುವಿನ ದೇಶವನ್ನೂ, ಉಳಿದ ಇರ್ವರು ಗಜಸೈನ್ಯವನ್ನೂ ಭಂಡಾರವನ್ನೂ ಬಯಸುವರು. ಆದುದರಿಂದ ಚಾಣಕ್ಯನನ್ನು ದೂರಗೊಳಿಸಿ ಮಹಾರಾಜನು ನನಗೆಂತು ಪ್ರೀತಿಯನ್ನುಂಟು ಮಾಡಿದನೊ, ಹಾಗೆಯೇ ಇವರಿಗೂ ಮೊದಲು ಹೇಳಿದರ್ಥವನ್ನು ನಡೆಯಿಸಿಕೊಡಬೇಕು.', ಇಷ್ಟೇ ಬಾಯಿಮಾತು.

ಮಲ—(ಕೇಳಿ ಸ್ವಗತಂ) ಹೇಗೆ? ಚಿತ್ರವರ್ಮಾದಿಗಳು ಕೂಡ ನನಗೆ ದ್ರೋಹವನ್ನು ಮಾಡುವರೆ? ಅಥವಾ ಆದುದರಿಂದಲೇ ಇವರಿಗೆ ರಾಕ್ಷಸನಲ್ಲಿ ನಿರತಿಶಯವಾದ ಸ್ನೇಹವು. (ಪ್ರಕಾಶಂ) ವಿಜಯೆ! ರಾಕ್ಷಸನನ್ನು ನೋಡಲಪೇಕ್ಷಿಸುವೆನು.

ಪ್ರತಿಹಾ—ಕುಮಾರನಾಜ್ಞೆಯಂತಾಗಲಿ. (ಎಂದು ಹೊರಟುಹೋದನು.)

(ಆನಂತರದಲ್ಲಿ ರಾಕ್ಷಸನು ತನ್ನ ಮನೆಯಲ್ಲಿ ಪೀಠಗತನಾಗಿ ಚಿಂತಿಸುತ್ತಾ ಸೇವಕನೊಡನೆ ಪ್ರವೇಶಿಸುವನು.)

ರಾಕ್ಷ—(ಸ್ವಗತಂ) ಚಂದ್ರಗುಪ್ತ ಬಲಗಳಿಂದ ನಮ್ಮ ಸೇನೆಯು ಪೂರ್ಣವಾದುದೆಂಬುದರಿಂದ ನನ್ನ ಮನಸ್ಸಿಗೆ ದಿಟವಾಗಿ ಪರಿಶುದ್ಧಿಯಿಲ್ಲ. ಏಕೆಂದರೆ ?

ವೃ॥ ಆವುದು ಸಾಧ್ಯದೊಳ್ ನಿಯತ ಮನ್ವಯಸಂಘಟಿತಂ ಸಪಕ್ಷಸ। ದ್ಭಾವಿ ವಿಪಕ್ಷದೂರ ಮದು ಸಾಧನ ಮಪ್ಪುದು ಸಾಧ್ಯಸಿದ್ಧಿಯೊಳ್ ॥ ಆವುದು ಸಾಧ್ಯಮಾಗಿಯೆ ಸಪಕ್ಷ ವಿಪಕ್ಷಸಮಂ ಸ್ವಪಕ್ಷದೊಳ್। ತೀವದೊ ತಾ ನದಂಮಹಿಸೆ ವಾದಿಯವೋಲ್ ಜನಪಂಗೆ ನಿಗ್ರಹಂ ॥

ಅಥವಾ ಮೊದಲೇ ನಮ್ಮ ಭೇದತಂತ್ರಗಳಿಗೊಳಗಾಗಿ ಅಸಮಾಧಾನ ಕಾರಣಗಳನ್ನು ತಿಳಿಹಿರುವುದರಿಂದ ಸಂಶಯಗೊಳ್ಳಲಾರೆನು. (ಪ್ರಕಾಶಂ) ಭದ್ರ ಪ್ರಿಯಮಂದಕನೆ! ಕುಮಾರನನ್ನು ಹಿಂಬಾಲಿಸುವ ರಾಜರಿಗೆ ನನ್ನ ಮಾತನ್ನು ತಿಳುಹಿಸು, “ಈಗ ಕುಸುಮಪುರವು ದಿನದಿನಕ್ಕೂ ಸಮೀಪಿಸುತ್ತಿರುವುದು. ಆದುದರಿಂದ ನೀವು ಬೇರೆಬೇರೆಯಾಗಿ ಸೇನೆಗಳನ್ನು ವಿಂಗಡಿಸಿಕೊಂಡು ಪ್ರಯಾಣಮಾಡಬೇಕು.” ಎಂತೆಂದರೆ,

ವೃ॥ ಸಾರುವದೆನ್ನ ಮುಂಗಡೆಯೊಳೀ ಮಗಧೇಶ್ವರ ಸೈನ್ಯವೆಲ್ಲ ಗಾಂ। ಧಾರಬಲಂ ತುರುಷ್ಕರೊಡಗೂಡುತೆ ಯತ್ನವ ಮಾಳ್ಕೆ ಮಧ್ಯದೊಳ್॥ ವೀರಶಕಾಧಿನಾಥ ರವರಿರ್ಪುದು ಪಿಂದೆಸೆ ಚೀಣಹೂಣರಿಂ ಸೇರಿ। ಕುಲೂತರಾಜಮುಖರಿರ್ಕೆ ಕುಮಾರನ ಮುತ್ತಿ ಸುತ್ತಲುಂ ॥ (ಎಂದು)

ಪ್ರಿ—ಹಾಗೆ (ಎಂದು ಹೊರಟುಹೋಗುವನು.)

ಪ್ರತೀ—(ಪ್ರವೇಶಿಸಿ) ಅಮಾತ್ಯನಿಗೆ ಜಯವಾಗಲಿ. ಅಮಾತ್ಯನೆ! ಕುಮಾರನು ನಿನ್ನನ್ನು ನೋಡಲೆಳಸುವನು.

ರಾಕ್ಷ—ವಿಜಯೆ! ಕೊಂಚ ನಿಲ್ಲು. ಯಾರಲ್ಲಿ?

ಪುರು—(ಪ್ರವೇಶಿಸಿ) ಅಮಾತ್ಯನಾಜ್ಞಾಪಿಸಬೇಕು.

ರಾಕ್ಷ—« ಕುಮಾರನು ಭೂಷಣಗಳಿಂದ ನಮ್ಮನ್ನಲಂಕರಿಸಿದ್ದನು. ಆದುದರಿಂದ ಅಲಂಕಾರವಿಲ್ಲದೆ ಕುಮಾರನನ್ನು ನೋಡುವುದು ಸರಿಯಲ್ಲ. ಆ ಮೂರು ಅಲಂಕಾರಗಳನ್ನು ಕೊಂಡುಕೊಂಡಿತ್ತಷ್ಟೆ! ಅವುಗಳಲ್ಲಿ ಒಂದಲಂಕಾರವನ್ನು ಕೊಡಬೇಕು " ಎಂದು ಶಕಟದಾಸನಿಗೆ ಹೇಳು.

ಪುರು—ಹಾಗೆ (ಎಂದು ಹೋಗಿ ಮರಳಿ ಬಂದು) ಅಮಾತ್ಯನೆ! ಇದೋ ಅಲಂಕಾರವು.

ರಾಕ್ಷ—(ಅಲಂಕರಿಸಿಕೊಂಡಂತೆ ನಟಿಸಿ ಎದ್ದು) ವಿಜಯೆ! ರಾಜನ ಬಳಿಗೆ ಹೋಗುವ ದಾರಿಯನ್ನು ತೋರಿಸು.

ಪ್ರತಿ—ಅಮಾತ್ಯನು ಬರಬೇಕು.

ರಾಕ್ಷ—ಅಧಿಕಾರವೆಂಬುದು ನಿರ್ದೋಷಿಯಾದ ಪುರುಷನಿಗೂ ಮಹಾಭೀತಿಯನ್ನುಂಟುಮಾಡುವುದು.

ವೃ|| ಪೊರೆದಪನಿಂದೆ ಸೇವಕಜನಂ ಭಯವಾಂಪುದು ದೂರದಿ
ದೋರ್ಡಂ। ಪರಿಸರಕ್ಕೈತರಲ್ಕವರ ಮಾನಸದೊಳ್ ನೆಲೆ
ಗೊಳ್ವುದಾಭಯಂ|| ಪಿರಿದಧಿಕಾರ ಮಾಕತದೆ ಲೋಕ
ವಿರೋಧಿ ಯೆನಿಪ್ಪುದಂತುಟೆ। ಲ್ಲರ ಪಗೆಗೀಡೆನಿಪ್ಪ ಪುರು
ಷಂ ಗವಸಾನದುರುಳ್ವುದೇ ಫಲಂ||

ಪ್ರತಿ—(ನಡೆದು) ಇದೋ ಕುಮಾರನು. ಅಮಾತ್ಯನು ದಯಮಾಡಿಸಬೇಕು.

ರಾಕ್ಷ—(ನಡೆದುನೋಡಿದಂತೆ ನಟಿಸಿ ಸ್ವಗತಂ) ಇದೊ ಕುಮಾರನು ಕುಳಿತಿರುವನು. ಈತನಾದರೆ,

ವೃ|| ಮನಕೇನೊಂದುಮನೊಲ್ಲದಂತೆ ವಿಷಯಂ ಕೈಗೊಳ್ಳದೀ
ರೀತಿ ಚಿಂ|| ತನದಿಂ ಬಳ್ಕದ ನೋಟಮಂ ನಿಜಪದಾಗ್ರಾಂ
ಗುಷ್ಠದೊಳ್ ಪೂಡುತಾ|| ನನಮಂ ಕೈಯೊಳಿತಾಳ್ದಿರಲ್
ವಹಿಸೆ ದುರ್ಧಾರ್ಯಂಗಳಾಗಿರ್ಪ ಕಾ| ರ್ಯನಿಕಾಯಂಗಳ
ಭಾರದಿಂದೆ ತಲೆವಾಗಿರ್ಪಂತೆ ಕಣ್ಗೊಪ್ಪುಗುಂ ||

(ಎಂದು ಬಳಿಗೆ ಹೋಗಿ ಪ್ರಕಾಶವಾಗಿ) ಕುಮಾರನಿಗೆ ಜಯವಾಗಲಿ.

ಮಲ—ಆರ್ಯನೆ! ವಂದಿಸುವೆನು. ಈ ಪೀಠದಲ್ಲಿ ಕುಳಿತುಕೊಳ್ಳಬೇಕು.

ರಾಕ್ಷ—(ಹಾಗೆ ಮಾಡುವನು.)

ಮಲ—ಆರ್ಯನನ್ನು ಕಂಡು ಬಹಳ ದಿನಗಳಾದುದರಿಂದ ನಾವು ಕಳವಳಿಸು
ತ್ತಿದ್ದೆವು.

ರಾಕ್ಷ—ಕುಮಾರನೆ! ನಾನು ಪ್ರಯಾಣಕ್ಕೆ ಸಜ್ಜುಗೊಳಿಸುತ್ತಿದ್ದುದರಿಂದ
ಕುಮಾರನ ಆಕ್ಷೇಪಕ್ಕೊಳಗಾದೆನು.

ಮಲ—ಆರ್ಯನೆ! ಪ್ರಯಾಣಕ್ಕೆ ಹೇಗೆ ಸಜ್ಜುಗೊಳಿಸಿರುವೆ? ಕೇಳಲಪೇ
ಕ್ಷಿಸುವೆನು.

ರಾಕ್ಷ—ಕುಮಾರನೆ! ಹಿಂಬಾಲಿಸುವ ರಾಜರಿಗೆ ಹೀಗೆ ಆಜ್ಞಾಪಿಸಿರುವೆನು.
ಸಾರುವದೆನ್ನ ಮುಂಗಡೆ (ಎಂದು ಹಿಂದಣ ಪದ್ಯವನ್ನು ಹೇಳುವನು.)

ಮಲ—(ಸ್ವಗತಂ) ಯಾವ ರಾಜರು ನನ್ನನ್ನು ನಾಶಗೊಳಿಸಿ ಚಂದ್ರಗುಪ್ತ
ನನ್ನು ಸೇವಿಸುವುದಕ್ಕೆಳಸುವರೊ, ಅವರೇ ನನ್ನನ್ನು ಮುತ್ತಿ ಬಳಸುವರೆ?
(ಪ್ರಕಾಶಂ) ಆರ್ಯನೆ! ಕುಸುಮಪುರಕ್ಕೆ ಹೋಗುವವನಾಗಲಿ ಅಲ್ಲಿಂದ
ಬರುವವನಾಗಲಿ ಯಾವನಾದರೂ ಉಂಟೊ?

ರಾಕ್ಷ—ಇನ್ನು ಹೋಗಿಬರುವ ಕೆಲಸವು ಮುಗಿಯಿತು. ಕೆಲವು ದಿನಗಳಲ್ಲಿ
ನಾವೇ ಹೋಗುವೆವು.

ಮಲ—(ಸ್ವಗತಂ) ತಿಳಿದೇ ಇದೆ. (ಪ್ರಕಾಶಂ) ಆದರೆ ಆರ್ಯನು ಈ ಮನುಷ್ಯನನ್ನು ಕಾಗದದೊಡನೆ ಕಳುಹಿಸಿದುದೇಕೆ ?

ರಾಕ್ಷ—(ನೋಡಿ) ಅಯ್ಯಾ ಸಿದ್ಧಾರ್ಥಕನೆ! ಇದೇನು ?

ಸಿದ್ಧಾ—(ಕಂಬನಿಗರೆದು) ಅಮಾತ್ಯನು ಪ್ರಸನ್ನನಾಗಬೇಕು. (ನಾಚಿಕೆಗೊಂಡವನಂತೆ ನಟಿಸಿ) ಹೊಡೆದುದರಿಂದ ನಾನು ರಹಸ್ಯವನ್ನು ಮರೆಮಾಚಲಾರದೆ ಹೋದೆನು.

ರಾಕ್ಷ---ಅಯ್ಯಾ! ಅದೇನು ರಹಸ್ಯವೋ ತಿಳಿಯಲಿಲ್ಲವಲ್ಲ!

ಸಿದ್ಧಾ—ಆದರೆ ಬಿನ್ನವಿಸುವೆನು. ಹೊಡೆದುದರಿಂದ ನಾನು (ಎಂದು ಅಧೋಕ್ತಿಯಲ್ಲಿ ಭಯದಿಂದ ತಲೆಯನ್ನು ಬಾಗಿಸಿಕೊಂಡು ನಿಲ್ಲುವನು.)

ಮಲ--ಭಾಗುರಾಯಣನೆ! ಇವನು ಭಯದಿಂದಲೋ, ನಾಚಿಕೆಯಿಂದಲೋ ಯಜಮಾನನೆದಿರಿಗೆ ಹೇಳುವುದಿಲ್ಲ. ಆರ್ಯನಿಗೆ ನೀನೇ ಹೇಳು.

ಭಾಗು---ಕುಮಾರನಾಜ್ಞೆಯಂತಾಗಲಿ. ಆರ್ಯನೆ! "ಅಮಾತ್ಯನು ಕಾಗದವನ್ನು ಕೊಟ್ಟು ಸಮಾಚಾರವನ್ನು ಹೇಳಿ ನನ್ನನ್ನು ಚಂದ್ರಗುಪ್ತನ ಬಳಿಗೆ ಕಳುಹಿಸಿದನು" ಎಂದು ಇವನು ಹೇಳುತ್ತಾನೆ.

ರಾಕ್ಷ--ಅಯ್ಯಾ ಸಿದ್ಧಾರ್ಥಕನೆ! ದಿಟವೆ?

ಸಿದ್ಧಾ—(ನಾಚಿಕೆಗೊಂಡು) ಬಹಳ ಹೊಡೆದುದರಿಂದ ನಾನು ಇದನ್ನು ಹೇಳಿದೆನು.

ರಾಕ್ಷ—ಇದು ಸುಳ್ಳು. ಪೆಟ್ಟು ತಿಂದವನು ಏನನ್ನು ತಾನೇ ಹೇಳಲಾರನು?

ಮಲ—ಮಿತ್ರ ಭಾಗುರಾಯಣನೆ! ಕಾಗದವನ್ನು ತೋರಿಸು. ಈ ಭೃತ್ಯನು ಬಾಯಿಮಾತನ್ನು ಹೇಳುವನು.

ಭಾಗು—ಅಮಾತ್ಯನೆ! ಇದೋ ಕಾಗದವು.

ರಾಕ್ಷ—(ಓದಿಕೊಂಡು) ಕುಮಾರನೆ! ಇದು ಶತ್ರುಗಳ ತಂತ್ರವು.

ಮಲ—ಬರೀ ಕಾಗದಕ್ಕೆ ಬದುಲಾಗಿ ಆರ್ಯನು ಕಳುಹಿಸಿರುವ ಇದು ಹೇಗೆ ಶತ್ರುಗಳ ತಂತ್ರವು ?

ರಾಕ್ಷ—(ಒಡವೆಗಳನ್ನು ನೋಡಿ) ಕುಮಾರನು ಇದನ್ನು ನನಗೆ ಕಳುಹಿಸಿದನು. ನಾನು ಇದನ್ನು ಒಂದು ಸಂತೋಷಕಾಲದಲ್ಲಿ ಈ ಸಿದ್ಧಾರ್ಥಕನಿಗೆ ಕೊಟ್ಟೆನು.

ಭಾಗು—ಇಂತಹ, ಅದರಲ್ಲಿಯೂ ಕುಮಾರನೇ ತನ್ನ ಶರೀರದಿಂದ ತೆಗೆದು ಅನುಗ್ರಹಿಸಿದ ಈ ಒಡವೆಗಳನ್ನು ಬಹುಮಾನ ಪಡೆಯುವುದಕ್ಕೆ ಪಾತ್ರನಿವನೊ ?

ಮಲ—ಆರ್ಯನು ಸಿದ್ಧಾರ್ಥಕನಿಂದ ಬಾಯಿಮಾತನ್ನು ಕೇಳಬೇಕೆಂದೂ ಬರೆದಿರುವನು.

ರಾಕ್ಷ—ಎಲ್ಲಿಂದ ಹೇಳಿಕಳುಹಿದುದೊ ? ಯಾರಿಗೆ ಹೇಳಿಕಳುಹಿದುದೊ ! ಕಾಗದವೇ ನನ್ನದಲ್ಲ.

ಮಲ—ಅದರೆ ಈ ಮುದ್ರೆಯು ಯಾರದು ?

ರಾಕ್ಷ—ಮೋಸಗಾರರು ಕಪಟ ಮುದ್ರೆಗಳನ್ನೂ ನಿರ್ಮಿಸಬಲ್ಲರು.

ಭಾಗು—ಕುಮಾರನೆ ! ಅಮಾತ್ಯನು ಚೆನ್ನಾಗಿ ಬಿನ್ನವಿಸುತ್ತಿರುವನು. ಭದ್ರ ಸಿದ್ಧಾರ್ಥಕನೆ ! ಈ ಕಾಗದವನ್ನು ಬರೆದವನು ಯಾವನು ?

ಸಿದ್ಧಾ—(ರಾಕ್ಷಸನ ಮುಖವನ್ನು ನೋಡಿ ಸುಮ್ಮನೆ ತಲೆಯನ್ನು ಬಾಗಿಸಿಕೊಂಡು ನಿಲ್ಲುವನು.)

ಭಾಗು—ಅಯ್ಯಾ ಸಾಕು. ಮರಳಿ ಹೊಡಿಸಿಕೊಳ್ಳಬೇಡ, ಹೇಳು.

ಸಿದ್ಧಾ—ಶಕಟದಾಸನು.

ರಾಕ್ಷ—ಕುಮಾರನೆ ! ಈ ಕಾಗದವನ್ನು ಶಕಟದಾಸನು ಬರೆದಿದ್ದಲ್ಲಿ ನಾನು ಬರೆದಂತೆಯೇ ಸರಿ.

ಮಲ—ವಿಜಯೆ ! ಶಕಟದಾಸನನ್ನು ನೋಡಲೆಳಸುವೆನು.

ಪ್ರತಿ—ಕುಮಾರನನಾಜ್ಞೆಯಂತಾಗಲಿ.

ಭಾಗು—(ಸ್ವಗತಂ) ಆರ್ಯ ಚಾಣಕ್ಯನ ಗೂಢಚಾರರು ಸಟೆಯನ್ನು ಹೇಳುವುದಿಲ್ಲ. ಆಗಲಿ. (ಪ್ರಕಾಶಂ) ಕುಮಾರನೆ ! ಶಕಟದಾಸನು ಅಮಾತ್ಯನೆದಿರಾಗಿ 'ನಾನು ಬರೆದೆನು' ಎಂದು ಎಂದಿಗೂ ಸಮ್ಮತಿಸಲಾರನು. ಆದುದರಿಂದ ಅವನು ಬರೆದ ಮತ್ತೊಂದು ಕಾಗದವನ್ನು ತರಲಿ. ಅಕ್ಷರಗಳ ಹೋಲಿಕೆಯೇ ಅದನ್ನು ವಿಂಗಡಿಸುವುದು.

ಮಲ—ವಿಜಯೆ ! ಹಾಗೆಯೇ ಮಾಡು.

ಪ್ರತಿ—ಮುದ್ರೆಯನ್ನೂ.

ಮಲ—ಎರಡನ್ನೂ ತೆಗೆದುಕೊಂಡು ಬಾ.

ಪ್ರತಿ—ಕುಮಾರನಾಜ್ಞೆಯಂತಾಗಲಿ. (ಎಂದು ಹೋಗಿ ಮರಳಿ ಬಂದು) ಕುಮಾರನೆ ! ಇದೊ ಶಕಟದಾಸನ ಕೈಯಿಂದಲೇ ಬರೆಯಲ್ಪಟ್ಟ ಕಾಗದವು, ಮುದ್ರೆಯೂ ಸಹ.

ಮಲ—(ಎರಡನ್ನೂ ನೋಡಿದಂತೆ ನಟಿಸಿ) ಆರ್ಯನೆ! ಅಕ್ಷರಗಳು ಹೋಲುವುವು.

ರಾಕ್ಷ—(ಸ್ವಗತಂ) ಅಕ್ಷರಗಳೇನೋ ಹೋಲುವುವು. ಶಕಟದಾಸನು ಮಿತ್ರನೆಂಬುದು ಮಾತ್ರ ಹೋಲುವುದಿಲ್ಲ. ಆದುದರಿಂದ ಶಕಟದಾಸನೇ ಇದನ್ನು ಬರೆದಿರಬಹುದೆ ?

ಕಂ|| ಸ್ಥಿರಕೀರ್ತಿಯನೊಲ್ಲದೆ ನ|
ಶ್ವರಮೆಂದೆನಿಪರ್ಥದಲ್ಲಿ ಲೋಭಂಗೊಳುತಂ ||
ಪೊರೆದಪನೊಳ್ ಭಕ್ತಿಯುಮಂ|
ಮರೆದು ಸತೀಸುತರ ನೆನೆದನಕ್ಕುಂ ಶಕಟಂ ||

ಅಥವಾ ಸಂಶಯವೇಕೆ ?

ವೃ॥ ಆತನ ಕೈಬೆರಲ್ಪೆರಸು ನೇಹದೊಳಿರ್ದುದು ಮುದ್ರೆಯುಂ
ಗ:ರಂ। ಪ್ರೀತತವಾಪ್ಪನೀತ ನಿದು ಲೇಖನಮು ಮಾತನ
ಲೇಖ ಸೂಚಕಂ॥ ಈತೆರನೇ ದಿಟಂ ಕಪಟಿಶತ್ರು ಕುಸಂ
ಧಿಯನೊಪ್ಪಿ ಭರ್ತೃಗಸಂ। ಪ್ರೀತಿಯ ನೊಲ್ಲದಾಶಕಟ ನಿಂ
ತೆಸಗಿರ್ದಪ ನಾತ್ಮಭೀತಿಯಿಂ॥

ಮಲ—(ನೋಡಿ) ಆರ್ಯನೆ! ಸತ್ಯವಂತನು ಕಳುಹಿದ ಅಲಂಕಾರತ್ರಯವೂ ಬಂದು ಸೇರಿತು, ಎಂದು ಬರೆದಿರುವುದಷ್ಟೆ! ಅವುಗಳಲ್ಲಿ ಇದೊಂದು ಅಲಂಕಾರವೊ? (ಚೆನ್ನಾಗಿ ನೋಡಿ) (ಆತ್ಮಗತಂ) ಅಹಾ! ಇದು ಪೂರ್ವ ದಲ್ಲಿ ನಮ್ಮ ತಂದೆಯು ಧರಿಸುತ್ತಿದ್ದ ಒಡವೆಯು (ಪ್ರಕಾಶಂ) ಆರ್ಯನೆ! ಈ ಅಲಂಕಾರವೆಲ್ಲಿಯದು ?

ರಾಕ್ಷ—ವರ್ತಕರಿಂದ ಕೊಂಡುಕೊಂಡೆನು

ಮಲ—ವಿಜಯೆ! ಈ ಒಡವೆಯನ್ನು ಗುರುತು ಹಿಡಿಯಬಲ್ಲೆಯಾ ?

ಪ್ರತಿ—(ನೋಡಿ ಕಂಬನಿಗರೆದು) ಕುಮಾರನೆ! ಪ್ರಖ್ಯಾತ ನಾಮಧೇಯನಾದ ಪರ್ವತೇಶ್ವರನು ಮೊದಲು ಧರಿಸುತ್ತಿದ್ದ ಈ ಒಡವೆಗಳನ್ನು ಹೇಗೆತಾನೆ ಗುರುತು ಹಿಡಿಯದಿರುವೆನು ?

ಮಲ—(ಕಂಬನಿಗರೆದು) ಅಹಾ ತಂದೆಯೆ!

ಕಂ॥ ಇಳಿಯರಾಣ್ಮ! ಭೂಷಣಪ್ರಿಯ!।
ಕುಳಭೂಷಣ ನಿನ್ನ ಭೂಷಣಾಳಿ ಯಿದಲ್ತೆ?॥
ಪೊಳೆದಿಯೊ ಮುಖಚಂದ್ರಮನಂ।
ತಳೆದಾವುದರಿಂದೆ ತಾರೆಗೆಯ ಸಂಜೆಯವೊಲ್॥

ರಾಕ್ಷ—(ಸ್ವಗತಂ) ಇದೇನು ? ಪರ್ವತೇಶ್ವರನು ಮೊದಲು ಧರಿಸುತ್ತಿದ್ದ ಒಡವೆಗಳೆಂದು ಹೇಳುವನು. ಇವನ ಒಡವೆಗಳೇ ದಿಟ. (ಪ್ರಕಾಶಂ) ಈ ಒಡವೆಗಳನ್ನೂ ಚಾಣಕ್ಯನಿಂದ ಪ್ರೇರಿತರಾದ ವರ್ತಕರೇ ನಮಗೆ ಮಾರಿರುವರು.

ಮಲ—ಆರ್ಯನೆ! ಪೂಜ್ಯನಾದ ತಂದೆಯೂ ಧರಿಸುತ್ತಿದ್ದ, ಅದರಲ್ಲಿಯೂ ಚಂದ್ರಗುಪ್ತನ ಕೈಗೆ ಸಿಕ್ಕಿದ್ದವುಗಳನ್ನು ವರ್ತಕರಿಂದ ಕ್ರಯಕ್ಕೆ ತೆಗೆದುಕೊಂಡುದೆಂಬುದು ಯುಕ್ತವಲ್ಲ. ಅಥವಾ ಇದು ಯುಕ್ತವೇ. ಏಕೆಂದರೆ—

ಕಂ|| ಪಿರಿದಹ ಲಾಭಮನೆಳಸುವ |
ನರಾಧಿಪತಿ ಚಂದ್ರಗುಪ್ತವಣಿಜಂಗೀ ಪಿಂ ||
ಗರ ದೊಡವೆ ಗಾಸಿಸುತೆ ನಿ |
ರ್ನೆರಮೆಮ್ಮನೆ ಮಾಲ್ಯದಂತೆ ಗೆಯ್ದೆಯ ಕುಟಿಲ ! ||

ರಾಕ್ಷ—(ಸ್ವಗತಂ) ಹಗೆಗಳ ಸಂವಿಧಾನವು ಹೊಂದಿಕೆಯಾಗಿ ಸೇರಿತು.

ವೃ|| ಓಲೆಯಿದೆನ್ನದಲ್ತೆನ ಲಿದುತ್ತರಮಲ್ಲ ಮದೀಯಮುದ್ರೆ
ಯಿಂ| ಲಾಲಿಪರಾರಿದಂ ಶಕಟಸಖ್ಯವ ಬಿಟ್ಟಹೆನೆಂದೆನಲ್
ಮಹೀ || ಪಾಲಕಮೌರ್ಯ ನೀತೊಡಿಗೆಮಾರಿದನೆಂ
ಬುದನಾರೊ ನಂಬುವರ್ | ಕಾಲಮ ಹತ್ವದುತ್ತರಮೆ
ಸಲ್ಲದು ಸಮ್ಮತಿಲೇಸು ಯೋಚಿಸಲ್ ||

ಮಲ—ಇದನ್ನು ಆರ್ಯನನ್ನು ಕೇಳುವೆನು.

ರಾಕ್ಷ—(ಕಂಬನಿಗರೆದು) ಕುಮಾರನೆ! ಯಾವನಾರ್ಯನೋ ಅವನನ್ನು ಕೇಳು, ನಾವು ಅನಾರ್ಯರಾದೆವು.

ಮಲ—ವೃ|| ನಿನಗಾತಂ ಪ್ರಭುಪುತ್ರಕಂ ವೃಷಲ ನಾಂ ಮಿತ್ರಾ
ತ್ಮಜಂ ಸೇವಕಂ | ನಿನಗಾತಂ ಧನಮೀವ ನಿಲ್ಲಿ
ನಮಗಂ ನೀನಿವೆ ನಿನ್ನಿಚ್ಛೆಯಿಂ || ನಿನಗಲ್ಲಿರ್ಪ
ಪ್ರಧಾನಮಂತ್ರಿಪದಮುಂ ಸೇವಾಸ್ಪದಂ ಸ್ವಾಮ್ಯ
ಮಿ| ಲ್ಲೆನ ಲಿಸ್ವಾವುದರಾಸೆ ನಿನ್ನುಮ ನನಾರ್ಯಂ
ಗೈವುದೋ ಕಾಣೆನಾಂ ||

ರಾಕ್ಷ—ಅಭಿಯುಕ್ತವ್ಯವಹಾರಿಯಾದ ಸೀನೇ ನನಗಿಂತು ನಿರ್ಣಯವನ್ನಿತ್ತೆ. ಆಗಲಿ, ನಿನ್ನ ದೋಷವೇನು? ಏಕೆಂದರೆ?

ವೃ॥ ಎನಗಾತಂ ಪ್ರಭುಪುತ್ರಕಂ ಕುವರ! ನೀಂ ಮಿತ್ರಾತ್ಮಜಂ ಸೇವಕಂ। ತನಗಾತಂ ಧನಮಿಾವ ನಿಲ್ಲಿ ನಿನಗುಂ ನಾನೀವೆ ನೆನ್ನಿಚ್ಛೆಯಿಂ॥ ಎನಗಲ್ಲಿರ್ಪ ಪ್ರಧಾನಮಂತ್ರಿ ಪದಮುಂ ಸೇವಾಸ್ಪದಂ ಸ್ವಾಮ್ಯಮಿ। ಲ್ಲೆನ ಲಿನ್ನಾವುದರಾಸೆ ಯೆನ್ನುಮ ನನಾರ್ಯರ್ಗಂ ಗೈವುದೋ ಕಾಣೆನಾಂ॥

ಮಲ—(ಒಡವೆಗಳ ಪೆಟ್ಟಿಗೆಯನ್ನೂ ತೋರಿಸಿ) ಈಗ ಇದೇನು?

ರಾಕ್ಷ—ಇದು ದೈವವಿಲಾಸವು. ಏಕೆಂದರೆ?

ವೃ॥ ಪಳಿವಿಗೆ ತಾಣಮೆಂದೆನಿಪ ಸೇವೆಯೊಳಿರ್ದೊಡ ಮಂತು ನೇಹದಿಂ। ಬಳೆಯಿಸಿ ಮಕ್ಕಳಂತೆ ಕಡುಸಂತಸದಿಂ ಪೊರೆದಾಕೃತಜ್ಞ ಭೂ॥ ವಳಯ ಪರೀಕ್ಷಕ ರ್ಪ್ರಭುಗಳಾವುದರಿಂ ಮಡಿದ ರ್ಮಹಾ ಭುಜೋ। ಜ್ವಳಜನ ಯತ್ನಮಂ ಕಿಡಿಪ ದುಸ್ತರದಾ ವಿಧಿ ದುರ್ವಿಲಾಸಮ್ಮೈ॥

ಮಲ—(ಕೋಪದಿಂದ) ಏನು? ಇನ್ನೂ ಮರೆಮಾಚುವೆಯ? ಇದು ದೈವದ ವಿಲಾಸವೋ? ಲೋಭದ್ದಲ್ಲವೊ? ನೀಚನೆ!

ವೃ॥ ಗರಳಮನೂಡಿ ಗೆಯ್ದು ವಿಷಕನ್ನೆಯ ನೊಡ್ಡಿ ಕೃತಘ್ನ! ನೀಂ ಮೊದಲ್। ಬರಿಸಿದೆ ನಂಬಿದೆನ್ನ ಜನಕಂಗೆ ಕಥಾಸ್ಪದಮಾದ ದೇಹಮಂ॥ ಪರಿಕಿಸಲೀಗಳುಂ ಪಗೆಯ ಮಂತ್ರಿಪದಂ ಪಿರಿದೆಂಬ ಲೋಭದಿಂ। ದುರುಳನೆ! ಮಾಂಸದಂತೆ ಪಗೆಗೆಮ್ಮನೆ ವಿಕ್ರಯಿಸಲ್ಕೆ ಪೂಣ್ದೆಯಾ?॥

ರಾಕ್ಷ—ಇದೊಂದು ಬೇರೆ ಹುಣ್ಣಿನಮೇಲೆ ನೂತಿಯು ಹುಟ್ಟಿತು. (ಪ್ರಕಾಶಂ) (ಕಿವಿಗಳನ್ನು ಮುಚ್ಚಿಕೊಂಡು)ಶಿವ-ಶಿವ, ಪರ್ವತೇಶ್ವರನಲ್ಲಿ ವಿಷಕನ್ಯೆಯುನ್ನು ಪ್ರಯೋಗಿಸಿದವನು ನಾನಲ್ಲ.

ಮಲ—ಆದರೆ ತಂದೆಯುನ್ನು ಕೊಲ್ಲಿಸಿದವನು ಯಾವನು ?

ರಾಕ್ಷ—ಈ ವಿಷಯದಲ್ಲಿ ದೈವವನ್ನು ಕೇಳಬೇಕು.

ಮಲ—ದೈವವನ್ನು ಕೇಳಬೇಕೆ? ಕ್ಷಪಣಕನಾದ ಜೀವಸಿದ್ಧಿಯುನ್ನಲ್ಲವೊ?

ರಾಕ್ಷ—(ಸ್ವಗತಂ) ಏನು ? ಜೀವಿಸಿದ್ಧಿಯೂ ಚಾಣಕ್ಯನ ಗೂಢಚಾರನೆ ? ಅಕಟಾ! ಶತ್ರುಗಳು ನನ್ನ ಹೃದಯವನ್ನು ಕೂಡ ವಶಪಡಿಸಿಕೊಂಡಿರುವರು.

ಮಲ—(ಕೋಪದಿಂದ) ಭಾಸುರಕನೆ ! ಶೇಖರಸೇನನಿಗೆ ಆಜ್ಞಾಪಿಸು—

"ರಾಕ್ಷಸನೊಡನೆ ಸ್ನೇಹವನ್ನು ಪಡೆದು, ನಮ್ಮನ್ನು ನಾಶಗೊಳಿಸಿ, ಚಂದ್ರಗುಪ್ತನನ್ನು ಸೇವಿಸಬೇಕೆಂದಿರುವ, ಕುಲೂತಪತಿಯಾದ ಚಿತ್ರವರ್ಮನು, ಮಲಯಾಧೀಶನಾದ ಸಿಹ್ಮನಾದನು, ಕಾಶ್ಮೀರನಾಥನಾದ ಪುಷ್ಕರಾಕ್ಷನೂ, ಸಿಂಧುರಾಜನಾದ ಸಿಂಧುಷೇಣನು, ಪಾರಸಿಗರಸನಾದ ಮೇಘನಾದನು ಎಂಬ ಐವರು ರಾಜರು ಇರುವರಷ್ಟೆ! ಅವರಲ್ಲಿ ಮೊದಲು ನನ್ನ ರಾಜ್ಯವನ್ನು ಬಯಸಿದ ಮೂವರನ್ನು, ಆಳವಾದ ಹಳ್ಳದಲ್ಲಿ ಹೂಳಿ ಮಣ್ಣಿನಿಂದ ಮುಚ್ಚಿಸಬೇಕೆಂದು, ನಮ್ಮ ಗಜ, ಬಲ, ಭಂಡಾರಗಳನ್ನು ಬಯಸುವ ಇರ್ವರನ್ನೂ ಆನೆಗಳಿಂದಲೇ ತುಳಿಸಿ ಕೊಲ್ಲಿಸಬೇಕೆಂದು."

ಪುರು—ಹಾಗೆ (ಎಂದು ಹೊರಟುಹೋದನು.)

ಮಲ—ರಾಕ್ಷಸನೆ! ನಾನು ವಿಶ್ವಾಸಘಾತುಕನಾದ ರಾಕ್ಷಸನಲ್ಲ. ನಾನು ಮಲಯಕೇತುವಲ್ಲವೆ! ಆದುದರಿಂದ ನಡೆ ' ಚಂದ್ರಗುಪ್ತನನ್ನೇ ಆಶ್ರಯಿಸು. ನೋಡು.

ಕಂ|| ಬರಲೊರ್ಮೆಯೆ ನಿನ್ನೊಡನಾ|
ಧರಣೀಧವನಸೌರ್ಯನೃಷಲ ನಾಚಾಣಕ್ಯಂ||
ತರಿದಪೆನಾಂ ಮೂವರುಮಂ|
ತಿರೆಯೊಳ್ ದುರ್ನೀತಿಯಂತೆ ವರ್ಗತ್ರಯಮಂ||

ಭಾಗು—ಇನ್ನು ಕಾಲಹರಣವು ಸಾಕು. ಕುಸುಮಪುರವನ್ನು ಮುತ್ತುವುದಕ್ಕಾಗಿ ಈಗಲೇ ನಮ್ಮ ಸೇನೆಗಳು ತೆರಳಲಿ.

ವೃ|| ತುಂಬಿಗುರುಳ್ಗಳೊಳ್ ತಳೆದ ಕರ್ಬೊಗರಂ ಕೆಡಿಸುತ್ತೆ ಲೊದ್ದದೂ | ಳಂ ಬಡೆದಿರ್ಪ ಗೌಡಿಯರ ಬೆಳ್ಗದಪಂ ನೆರೆಧೂಮ್ರವಾಗಿ ಸು|| ತ್ತಿಂಬಿನೊಳಶ್ವಸೇನೆಯ ಖುರಾಹತಿಯಿಂ ಜನಿಸುತ್ತೆ ನಾಗದಾ| ನಾಂಬುವ ಪಾಯ್ದು ಮೂಲ ಮಳಿದಿರ್ಪ ರಜಸ್ತತಿ ಬಿಳ್ಗೆ ವೈರಿಯೊಳ್||

(ಮಲಯಕೇತು ಪರಿಜನದೊಡನೆ ಹೊರಟುಹೋದನು.)

ರಾಕ್ಷ—ಆಕಟಕಟಾ! ದೀನರಾದ ಚಿತ್ರವರ್ಮಾದಿಗಳೂ ಕೊಲ್ಲಲ್ಪಟ್ಟರಲ್ಲಾ! ರಾಕ್ಷಸನು ಮಿತ್ರವಿನಾಶಕ್ಕಾಗಿ ಯತ್ನಿಸುವನೇ ಹೊರತು ಶತ್ರುವಿನಾಶಕ್ಕಲ್ಲ. ಆದುದರಿಂದ ನಿರ್ಭಾಗ್ಯನಾದ ನಾನೀಗೇನು ಮಾಡಲಿ?

ವೃ|| ನಡೆದಪೆನೇಂ ತಪೋವನಕೆ! ಶಾಂತಿಯನೊಂದದು ವೈರಿಮನ್ಮನಂ| ಮಡಿದಪೆನೆಂದೊಡಾ ರಿಪು ಬರ್ದುಂಕಿರೆ ಪೆಣ್ಗಳಿಗರ್ಹ ಮಾತೆರಂ|| ಕಡುಗದರಾತಿಯಂ ತರಿವೆನೆಂದೆನೆ ಚಂದನದಾಸ ಮೋಕ್ಷದೊಳ್| ಸಡಗರಗೊಂಡಪಂ ತಡೆವು ಪೆನ್ನವನಂ ಕೃತವೇದಿಭಾವದಿಂ||

(ಎಂದೆಲ್ಲರೂ ಹೊರಟುಹೋದರು.)

— ಪಂಚಮಾಂಕಂ ಸಮಾಪ್ತಂ —

# ಷ ಷ್ಠಾ ೦ ಕ ೦

(ಅನಂತರದಲ್ಲಿ ಅಲಂಕೃತನಾದ ಸಿದ್ಧಾರ್ಥಕನು ಪ್ರವೇಶಿಸುವನು.)

ಕಂ|| ಜಯಿಸುಕುಂ ಜಲದಾಭಂ ಕೇ|
ಶಿಯು ನಳಿಸಿದ ಕೇಶವಂ ಜನಾಂಬಕಚಂದ್ರಂ||
ಜಯಶಾಲಿ ಚಂದ್ರಗುಪ್ತಂ|
ಜಯಿಸುಕುಂ ಚಾಣಕ್ಯನೀತಿ ನಿಖಿಲರಿಪುಹರಂ||

ಆಗಲಿ, ಬಹಳಕಾಲವಾದುದರಿಂದ ಪ್ರಿಯಮಿತ್ರನಾದ ಸಮಿದ್ಧಾರ್ಥಕನನ್ನು ನೋಡಿಬರುವೆನು. (ಎಂದು ನಡೆದುನೋಡಿ) ಇದೋ! ಪ್ರಿಯಸಖನಾದ ಸಮಿದ್ಧಾರ್ಥಕನು ಇತ್ತಲೇ ಬರುತ್ತಿರುವನು. ಆಗಲಿ ಈತನ ಬಳಿಗೆ ಹೋಗುವೆನು. (ಅನಂತರದಲ್ಲಿ ಸಮಿದ್ಧಾರ್ಥಕನು ಪ್ರವೇಶಿಸುವನು.)

ಸಮಿ—ಕಂ|| ದಂದುಗವಂ ಕಳೆವುದರೊಳ್ |
ಚಂದಿರನಂ ಪ್ರೋಲ್ವ ಮಂದಿರೋತ್ಸವದೊಳಗಾ ||
ನಂದನರಹ ಕೆಳೆಯು ದೂರ್ |
ರಂತಳರಲ್ ವೈಭವಂಗಳುಂ ಬಿದೆಗೊಳಿಕುಂ||

ಪ್ರಿಯಮಿತ್ರನಾದ ಸಿದ್ಧಾರ್ಥಕನು ಮಲಯಕೇತುವಿನ ಶಿಬಿರದಿಂದ ಬಂದನೆಂದು ಕೇಳಿದೆನು. ಅವನನ್ನು ಹುಡುಕುವೆನು. (ಎಂದು ಹೊರಟು ನೋಡಿ) ಇದೊ! ಸಿದ್ಧಾರ್ಥಕನು.

ಸಿದ್ಧಾ—(ಬಳಿಗೆ ಹೋಗಿ) ಪ್ರಿಯಮಿತ್ರನೆ! ಸುಖವೇ ? (ಎಂದೊಬ್ಬರನ್ನೊಬ್ಬರಾಲಂಗಿಸಿಕೊಳ್ಳುವರು.)

ಸಮಿ—ಮಿತ್ರನೆ! ನನಗೆ ಸುಖವೆತ್ತಣದು ? ನೀನು ಬಹುಕಾಲದಮೇಲೆ ದೇಶಾಂತರದಿಂದ ಹಿಂದಿರುಗಿ ಬಂದರೂ ಇನ್ನೂ ನಮ್ಮ ಮನೆಗೆ ಬಾರದಿರುವೆಯಲ್ಲ ?

ಸಿದ್ಧಾ—ಪ್ರಿಯಸಖನು ಪ್ರಸನ್ನನಾಗಬೇಕು. ಆರ್ಯಚಾಣಕ್ಯನು ನನ್ನನ್ನು ನೋಡಿದಕೂಡಲೇ "ಸಿದ್ಧಾರ್ಥಕನೆ! ನಡೆ. ಈ ಪ್ರಿಯವಾರ್ತೆಯನ್ನು ಸ್ವಾಮಿಯಾದ ಚಂದ್ರಗುಪ್ತನಿಗೆ ತಿಳುಹಿಸು." ಎಂದಾಜ್ಞಾಪಿಸಿದನು. ಆಮೇಲೆ ಆತನಿಗೆ ತಿಳುಹಿಸಿ, ಈ ರಾಜಪ್ರಸಾದವನ್ನು ಪಡೆದು, ಪ್ರಿಯಮಿತ್ರನನ್ನು ನೋಡುವುದಕ್ಕಾಗಿ ನಿನ್ನ ಮನೆಗೇ ಹೊರಟಿರುವೆನು.

ಸಮಿ—ಮಿತ್ರನೆ! ನಾನು ಕೇಳಬಹುದಾಗಿದ್ದಲ್ಲಿ ಹೇಳು. ಪ್ರಿಯದರ್ಶನನಾದ ಚಂದ್ರಗುಪ್ತನಿಗೆ ತಿಳುಹಿದ ಪ್ರಿಯವಾರ್ತೆಯೇನು?

ಸಿದ್ಧಾ—ಮಿತ್ರನೆ! ನಿನಗೂ ಹೇಳಬಾರದುದುಂಟೆ? ಆದರೆ ಕೇಳು. ಚಾಣಕ್ಯನ ನೀತಿಯಿಂದ ಮರುಳಾದ ಮಲಯಕೇತು ಹತಕನು ರಾಕ್ಷಸನನ್ನು ಹೊರಡಿಸಿ, ಪ್ರಧಾನರಾದ ಚಿತ್ರವರ್ಮ ಮೊದಲಾದ ಐವರು ರಾಜರನ್ನೂ ಕೊಲ್ಲಿಸಿದನು. ಆಬಳಿಕ ಸಕಲ ಸಾಮಂತರಾಜರೂ ಇವನು ದೂರದೃಷ್ಟಿಯಿಲ್ಲದ ದುರಾಚಾರನೆಂದು ತಿಳಿದು, ಮೂಢನಾದ ಆ ಮಲಯಕೇತು ಹತಕನ ಶಿಬಿರವನ್ನು ಬಿಟ್ಟು, ಭಯಭ್ರಾಂತರಾದ ಉಳಿದ ಸೈನಿಕರಿಂದೊಡಗೂಡಿ ನಿರ್ವಿಣ್ಣ ಹೃದಯರಾಗಿ ಭಯಗೊಂಡು ಉಪಾಯದಿಂದ ತಮ್ಮತಮ್ಮ ದೇಶಗಳಿಗೆ ತೆರಳಲು, ಭದ್ರಭಟ, ಪುರುಷದತ್ತ, ಡಿಂಗಿರಾತ, ಬಲಗುಪ್ತ, ರಾಜಸೇನ, ಭಾಗುರಾಯಣ, ಲೋಹಿತಾಕ್ಷ, ವಿಜಯವರ್ಮರೇ ಮೊದಲಾದವರು ಮಲಯಕೇತುವನ್ನು ಸೆರೆಹಿಡಿದರು.

ಸಮಿ—ಮಿತ್ರನೆ! ಭದ್ರಭಟ ಪ್ರಮುಖರು ಸ್ವಾಮಿಯಾದ ಚಂದ್ರಗುಪ್ತನಲ್ಲಿ ಅಸಮಾಧಾನದಿಂದ ಮಲಯಕೇತುವನ್ನು ಆಶ್ರಯಿಸಿದರೆಂದು, ಜನರು ಹೇಳಿಕೊಳ್ಳುವರಲ್ಲಾ! ಇದೇನು? ಕುಕವಿರಚಿತವಾದ ನಾಟಕದಂತೆ ಆದಿಯಲ್ಲೊಂದು ಅಂತ್ಯದಲ್ಲೊಂದಾಗಿರುವುದು.

ಸಿದ್ಧಾ—ಮಿತ್ರನೆ! ದೈವಗತಿಯಂತೆ ಅಶ್ರುತಗತಿಯಾದ ಚಾಣಕ್ಯನೀತಿಗೆ ನಮಸ್ಕಾರವು.

ಸಮಿ—ಆಮೇಲಾಮೇಲೆ?

ಸಿದ್ಧಾ—ಆಮೇಲೆ ಬಲವಾದ ಸಹಾಯವನ್ನು ಪಡೆದ ಆರ್ಯ ಚಾಣಕ್ಯನು ಇಲ್ಲಿಂದ ಹೊರಟು, ಸಕಲರಾಜರಿಂದೊಡಗೂಡಿದ ಮ್ಲೇಚ್ಛಬಲವನ್ನೆಲ್ಲಾ ವಶಗೊಳಿಸಿಕೊಂಡನು.

ಸಮಿ—ಮಿತ್ರನೆ! ಅದೆಲ್ಲಿ?

ಸಿದ್ಧಾ—ಅದೋ ನೋಡು.

ವೃ|| ಅತಿಶಯ ದಾನದರ್ಪದೊಳಿಭಂಗಳಿವ್ರುಂ ಜಲದಿಂದೆ
ತುಂಬಿ ತು | ಳ್ಯುತವಿಹ ಕಾಮುರ್ಗಿಲ್ಗಳಿನೆ ಘೀಳಿ
ಡುಗುಂ ಸುಳಿದಾಡುತೆಲ್ಲಿಯುಂ || ಚತುರಕಶಾಭಿ
ಘಾತ ದುರೆ ಕಂಪನು ನೊಂದಿದ ವಾರುವಂಗಳಿಂ|
ತತಿಲಯದಿಂ ಜಯಾರವನು ನಾಲಿಸುತಂ ಜವ
ದೋಡುತಿರ್ಪುವೈ ||

ಸಮಿ—ಮಿತ್ರನೆ! ಇದಂತಿರಲಿ. ಹಾಗೆ ಎಲ್ಲರೆದುರಿಗೂ ಅಧಿಕಾರವನ್ನು ಬಿಟ್ಟ ಚಾಣಕ್ಯನು ಈಗ ತಿರುಗಿ ಅದೇ ಮಂತ್ರಿಪದವನ್ನು ಹೇಗೆ ಪಡೆದನು?

ಸಿದ್ಧಾ—ಮಿತ್ರನೆ! ನೀನು ಈಗ ಬಹಳ ಮೂಢನಾದೆ. ಅಮಾತ್ಯ ರಾಕ್ಷಸನಿಂದಲೂ ತಿಳಿಯಲಾಗದ ಆರ್ಯ ಚಾಣಕ್ಯನ ತಂತ್ರವನ್ನು ತಿಳಿಯಲಪೇಕ್ಷಿಸುವೆಯಲ್ಲಾ.

ಸಮಿ—ಮಿತ್ರನೆ! ಈಗ ಅಮಾತ್ಯರಾಕ್ಷಸನೆಲ್ಲಿ?

ಸಿದ್ಧಾ—ಆ ಪ್ರಳಯಸಂಗ್ರಾಮ ಕೋಲಾಹಲವು ಹೆಚ್ಚುತ್ತಿರಲು, ಅಮಾತ್ಯ ರಾಕ್ಷಸನು ಮಲಯಕೇತುವಿನ ಪಾಳೆಯದಿಂದ ಹೊರಟು ಭಯ

ಭ್ರಾಂತನಾಗಿ, ಉದಂಬರನೆಂಬ ಚಾರನ ಸಂಧಾನದಿಂದ ಪಾಟಲೀ ಪುರೋದ್ಯಾನಕ್ಕೆ ಬಂದನೆಂದು ಚಾಣಕ್ಯನಿಗೆ ತಿಳುಹಿದೆನು.

ಸವಿ—ಮಿತ್ರನೆ! ಅಮಾತ್ಯ ರಾಕ್ಷಸನು ನಂದರಾಜ್ಯವನ್ನು ಹಿಂದಿರುಗಿಸುವುದರಲ್ಲಿ ಅಷ್ಟು ಪ್ರಯತ್ನವನ್ನು ಮಾಡಿ, ಕಡೆಗೆ ಕಾರ್ಯವನ್ನು ಗೆಲ್ಲದೆಯೇ ಮರಳಿ ಇದೇ ಪಾಟಲೀಪುರಕ್ಕೆ ಹೇಗೆ ಬಂದನು?

ಸಿದ್ಧಾ—ಚಂದನದಾಸನ ಸ್ನೇಹದಿಂದ ಬಂದನೆಂದೂಹಿಸುವೆನು.

ಸವಿ—ಮಿತ್ರನೆ! ದಿಟ. ಚಂದನದಾಸನ ಸ್ನೇಹದಿಂದಲೇ, ಇನ್ನು ಚಂದನದಾಸನಿಗೆ ಮೋಕ್ಷವಾಗುವುದು.

ಸಿದ್ಧಾ—ಮಂದಭಾಗ್ಯನಾದ ಅವನಿಗೆ ಮೋಕ್ಷವೆತ್ತಣದು? ನಾವಿಬ್ಬರೂ ಈಗ ಆರ್ಯ ಚಾಣಕ್ಯನ ಅಪ್ಪಣೆಯಂತೆ ಅವನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗಿ ಸಂಹರಿಸಬೇಕು.

ಸವಿ—(ಕೋಪದಿಂದ) ಮಿತ್ರನೆ! ಆರ್ಯ ಚಾಣಕ್ಯನಿಗೆ ಮತ್ತಾವನೂ ಕಟುಕನು ದೊರೆಯಲಿಲ್ಲವೊ? ನಮ್ಮನ್ನು ಇಂತಹ ಕಟುಕರ ಕೆಲಸದಲ್ಲಿ ನಿಯಮಿಸುವನಲ್ಲ!

ಸಿದ್ಧಾ—ಮಿತ್ರನೆ! ಲೋಕದಲ್ಲಿ ಬದುಕಬೇಕೆಂದಿರುವ ಯಾರು ತಾನೇ ಆರ್ಯ ಚಾಣಕ್ಯನ ಆಜ್ಞೆಗೆ ವಿರೋಧವಾಗಿ ನಡೆಯುವರು? ಆದುದರಿಂದ ಚಂಡಾಲವೇಷವನ್ನು ಧರಿಸಿ, ಚಂದನದಾಸನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗೋಣ....ಬಾ. (ಎಂದಿಬ್ಬರೂ ತೆರಳಿದರು.)

—(ಇದು ಪ್ರವೇಶಕಂ)—

(ಅನಂತರದಲ್ಲಿ ರಜ್ಜುಹಸ್ತನಾದ ಪುರುಷನು ಪ್ರವೇಶಿಸುವನು.)

ಪುರು— ಕಂ|| ಸದಮಲ ಷಡ್ಗುಣಸಂಯೋ|
ಗದೆ ಸುದೃಢಂ ಯುಕ್ತಿಘಟಿತಪಾಶಮುಖಂ ದು||
ರ್ಮದ ರಿಪುಸಂಯಮನಾದರ|
ಮೊದವಿದ ಚಾಣಕ್ಯನೀತಿಪಾಶಂ ಜಯಿಕುಂ||

(ಎಂದು ನಡೆದು ನೋಡಿ) ಉದುಂಬರನೆಂಬ ಚಾರನು ಆರ್ಯ ಚಾಣಕ್ಯನಿಗೆ ತಿಳುಹಿಸಿದ ಪ್ರದೇಶವು ಇದೇ ಅಲ್ಲವೆ? ಆದುದರಿಂದ ನಾನು ಆರ್ಯ ಚಾಣಕ್ಯನ ಅಪ್ಪಣೆಯಂತೆ ಇಲ್ಲಿಯೇ ಅಮಾತ್ಯ ರಾಕ್ಷಸನನ್ನು ನೋಡುವೆನು. (ಎಂದು ನೋಡಿ) ಇದೇನು! ಈ ಅಮಾತ್ಯ ರಾಕ್ಷಸನು ತಲೆಗೆ ಮುಸುಕಿಟ್ಟುಕೊಂಡು ಇತ್ತಲೇ ಬರುತ್ತಿರುವನು. ಆದುದರಿಂದ ನಾನು ಈ ತೋಟದ ಗಿಡಗಳಲ್ಲಿ ಔತುಕೊಂಡು, ಈತನು ಎಲ್ಲಿ ಕುಳಿತುಕೊಳ್ಳುವನೋ ನೋಡುವೆನು (ಎಂದು ಔತುಕೊಂಡಿರುವನು.)

(ಅನಂತರದಲ್ಲಿ ಮೇಲೆ ಹೇಳಿದಂತೆ ರಾಕ್ಷಸನು ಶಸ್ತ್ರಧಾರಿಯಾಗಿ ಪ್ರವೇಶಿಸುವನು.)

ರಾಕ್ಷ—(ಕಂಬನಿಗರೆದು) ಅಕಟಾ! ಕಷ್ಟಂ! ಕಷ್ಟಂ!

ವೃ|| ಸಿರಿ ತಳರ್ದಳ್ ಕುಲಾಂತರಮನಾಶ್ರಯಮಾಶದೆ ವೇಶಿ
ಯಂದದಾ | ಸಿರಿಗನುವಾದು ದೊಲ್ಮೆಯುಂ ನಗಲ್ದು
ಗತಾನುಗತಂ ಪ್ರಜಾಳಿಯುಂ || ತೊರೆದಿಹ ರಾಷ್ಟ್ರಮಂ
ಪುರುಷಕಾಲಫಲಂಗೊಳ ದುಜ್ಝುಗಂಗಳಂ | ವಿರಚಿಪು
ದೇನನೀಗ ಳಥವಾ ತಲೆವೋದೊಡಲಂದದಿರ್ಪವೈ|| ಮತ್ತಂ,

ವೃ|| ಧರೆಗಧಿನಾಥನಂ ಪ್ರಥಿತಸತ್ಕುಲನಂ ತೊರೆದೆಮ್ಮ ದೇವನಂ|
ಸಿರಿಯವಿನೀತೆ ತಾಂ ವೃಷಲನಂ ವೃಷಲಾಂಗನೆಯಂತೆ
ಸೇರ್ದಳು || ಸ್ಥಿರತೆಯ ನಾಂತ ಳಾತನೊಳೆ ಗೈದಪುದೇ
ನತಿಭಕ್ತಿಯಿಂದೆ ನಾಂ | ವಿರಚಿಪ ಯತ್ನಮುಂ ವಿಧಿಯೆ
ನಿಷ್ಫಲಮಾಗಿಸ ಲಿಂತು ಶತ್ರುವೋಲ್ ||

ನಾನಾದರೋ,

ವೃ|| ಅತುಲಿತ ಮೃತ್ಯುಯೋಗದೆ ದಿವಂಗತನಾಗೆ ಮಹೀಶ
ನಂತು ಪ | ರ್ವತಪತಿ ಪಕ್ಷಮಂ ವಹಿಸಿ ಮಾಡಿದೆ ನಾಂ

ಸುವಿಶಾಲಯತ್ನಮಂ ॥ ವ್ಯತಿಗನುವಾಗಲಾತ ನವನಾ
ತ್ಮಜನಿಂದಮುಂ ವಿಂತುಟಾಗ ಲೀ। ಕ್ಷಿತಿಪತಿ ನಂದವಂಶ
ಕಹಿತಂ ವಿಧಿಯಲ್ಲದೆ ಪಾರ್ವ ನಲ್ಲನೈ ॥

ಅಕಟಾ! ಆ ಮ್ಲೇಚ್ಛನ ಅವಿವೇಕವನ್ನು ಏನುಹೇಳಲಿ?
ಏಕೆಂದರೆ,

ವೃ॥ ನೊಳಕೆಯುಂ ಮಿಲ್ಲದಂತಳಿದೊಡಂ ಪ್ರಭುವಂಶವು ನಿಂತು
ಸೇವಿಸ। ಲ್ಕೆಳಸುವ ರಾಕ್ಷಸಂ ಮುಡಿಯದಾ ರಿಪುವರ್ಗ
ದೊಳಿಂತು ಸಂಧಿಸುಂ॥ ಬೆಳೆಯಿಪ ನೆಂದು ಯೋಚಿಸದೆ
ನಂಬಿದನಲ್ತೆ! ತುರುಷ್ಕನೆಲ್ಲಮಂ। ಪಳಿದಪುದೇತಕಾಂ
ವಿಧಿಹತಂಗೆ ವಿವೇಕಮದೆಲ್ಲ ಪಲ್ಲಟಂ॥

ಆದುದರಿಂದ ಈಗಲೂ ರಾಕ್ಷಸನು ಶತ್ರುಗಳ ಕೈಗೆ ಸಿಕ್ಕಿಯಾದರೂ
ಸಾಯುವನೇ ಹೊರತು ಚಂದ್ರಗುಪ್ತನೊಡನೆ ಸಂಧಿಯನ್ನು ಮಾಡಿ
ಕೊಳ್ಳಲಾರನು. ಅಥವಾ, ಆ ರಾಕ್ಷಸನು ಅಸತ್ಯವಂತನಾದನೆಂಬ
ಅಪಕೀರ್ತಿಯೇ ಲೇಸಲ್ಲದೆ, ಶತ್ರುಗಳ ವಂಚನದಿಂದ ಪರಾಜಿತನಾದ
ನೆಂಬುದು ಲೇಸಲ್ಲ. (ಎಂದು ಸುತ್ತಲೂ ನೋಡಿ ಕಂಬನಿಗರೆದು)
ಆಹಾ! ಸ್ವಾಮಿಪಾದಸಂಚಾರ ಪರಿಚಯದಿಂದ ಪವಿತ್ರಗಳಾದ ಕುಸುಮ
ಪುರಪ್ರಾಂತ ಪ್ರದೇಶಗಳು ಇವೇ ಅಲ್ಲವೆ? ಇಲ್ಲಿಯಾದರೆ—

ವೃ॥ ಇದುಮುನ್ನಂ ಬಿಲ್ಲ ನಾಣ್ಮಂ ಸೆಳೆವವಸರದೊಳ್ ಬಿಟ್ಟ
ಬಾಯ್ಗ್ವಾಸು ಜಾರಲ್। ಪದಪಿಂದಂ ವಾಜಿಯಂ ಪಾರಿ
ಸುತೆ ಗುರಿಗಳೊಳ್ ಬಾಣಮಿಟ್ಟ ಪ್ರದೇಶಂ॥ ಇದು ತಾಂ
ಕುಳ್ಳಿರ್ದು ಸಲ್ಲಾಪಿಸಿದುಪವನ ಮಾರಾಜರಂ ಸೀಗುತಿಂ
ತಿ। ಪುರದ ಸೀಗಳ್ ನೋಡುವೆಸ್ನುಮ್ಮಳವ ಬಳೆಯಿಕುಂ
ರಾಜಧಾನೀ ಸ್ಥಲಂಗಳ್॥

ಆದುದರಿಂದ ಮಂದಭಾಗ್ಯನಾದ ನಾನು ಎಲ್ಲಿ ಹೋಗಲಿ? (ಎಂದು ನೋಡಿ) ಆಗಲಿ ಈ ಜೀರ್ಣೋದ್ಯಾನವನ್ನು ನೋಡಿದೆನಷ್ಟೆ. ಇದನ್ನು ಪ್ರವೇಶಿಸಿ ಯಾರಿಂದಲಾದರೂ ಚಂದನದಾಸನ ವೃತ್ತಾಂತವನ್ನು ತಿಳಿಯುವೆನು. ಪ್ರಾಣಿಗಳಿಗೆ ಸುಖದುಃಖ ಪರಿಣಾಮಗಳು ತಿಳಿಯದಂತೆಯೇ ಬರುವುವಲ್ಲವೆ. ಏಕೆಂದರೆ—

ವೃ|| ಪೊಳಲಿಚರಿಂದುರೇಖೆಯವೊ ಲಂಗುಳಿಯಿಂ ನಸುದೋರೆ ರಾಜಮುಂ | ಡಳಿಯೊಡ ನಾವ ನಾಂ ತಳರ್ದೆ ನೀಪುರದಿಂ ನೃಪನಂತೆ ಮುನ್ನ ವಿಾ | ಗಳೆ ವಿಫಲಪ್ರಯತ್ನತೆಗೆ ನಾಣ್ಚುತೆ ನಾನಿದೊ ಚೋರನಂತುಟೀ | ಪೊಳಲೊಳ ಃಸಾರ್ಕೆ ಭೀತಿನಡೆ ದೀಪಳದೋಂಟಕೆ ಬೇಗ ಪೋದಪೆಂ ||

ಅಥವಾ ಯಾರನುಗ್ರಹದಿಂದ ಇದುಂಟಾಗಿದ್ದುದೋ ಅವರೇ ಇಲ್ಲ (ಎಂದು ಪ್ರವೇಶಿಸಿ ನೋಡಿದಂತೆ ನಟಿಸಿ) ಅಹಾ! ಈ ಹಳೆಯ ಪೂದೋಟವು ಎಷ್ಟು ಅಂದಗೆಟ್ಟಿರುವುದು.

ವೃ|| ಕರುವಮಾಡಂ ಪಲ್ಲಟಂಗೊಂಡುರುಳಿಹುದು ಮಹಾರಂಭ ಮುದ್ಯತ್ಕುಲಂಬೊಲ್|ಸರಸುಂ ತಾಂ ಶುಷ್ಕವಾಗಿರ್ಪುದು ಸಖಿವಿಲಯಂಬೆತ್ತ ಸಚ್ಚೇತನಂಬೋಲ್ || ತೊರೆದಿರ್ಕುಂ ಪಣ್ಗಳಂ ಪೆರ್ಮರಮಿವು ನಯಮಾರ್ಗಂಗಳಂ ದುರ್ನೃಪಂ ಬೋಲ್ | ತಿರೆಯುಂ ಪುಲ್ಮುರ್ಚಿಕೊಂಡಿರ್ಪುದು ಜಡಮತಿಯಂ ಪೆರ್ಚಿದಾ ದುರ್ನಯಂಬೋಲ್ ||

ಮತ್ತಂ—ವೃ|| ಖರಪರಶುಪ್ರಹಾರದುರೆ ಗಾಯಮನೊಂದಿ ಕಪೋತನಾದಮೆಂ | ಬುರುತರ ರೋದನಧ್ವನಿಗಳಿಂ ಪಳುವಂತಿಹ ಪೆರ್ಮರಂಗಳೋಳ್ || ಪರಿಚಯ

ದುಃಖದಿಂದೆ ಬಿಸುಸುಯ್ವುಹಿಗಳ್ ದಯೆಗೆಯ್ವು
ತಮ್ಮೆಚೆ। ಪ್ಪೊರೆ ದುಗುಲಂಗಳಿಂ ವಿಟಪಮುಂ
ವ್ರಣದಂತಿರೆ ಸುತ್ತ ಬಂಧಿಕುಂ ॥

ಈ ಬಡಗಿಡಗಳಾದರೆ—

ಕಂ॥ ಪುಳುಸನೆದ ರಂಧ್ರದಿಂ ಪಾ।
ಲಿಳಿತರೆ ಕಂಬನಿವೊಲೊಡಲಿ ದೊಣಗಿರೆ ಧಗೆಯಿಂ ॥
ನೆಳಲಿಲ್ಲದ ಮರಗಳಿವುಂ।
ಬಳಲುತೆ ಮಸಣಕ್ಕೆ ತೆರಳುವಂದದೊಳಿರ್ಕುಂ ॥

ನಾನು ಈ ದುರವಸ್ಥೆಗೆ ತಕ್ಕ ಬಿದ್ದ ಕಲ್ಲಿನ ಮೇಲೆ ಕೊಂಚಹೊತ್ತು ಕುಳಿತುಕೊಳ್ಳುವೆನು. (ಎಂದು ಕುಳಿತುಕೊಂಡು ಕೇಳಿದಂತೆ ನಟಿಸಿ) ಆಹಾ ಇದೇನು? ಆಕಸ್ಮಿಕವಾಗಿ ಭೇರೀಶಂಖಾರವಗಳಿಂದ ಮಿಶ್ರವಾದ ಮಂಗಳಧ್ವನಿಯು ಕೇಳಿಬರುತ್ತಿರುವುದು. ಇದಾದರೆ—

ವೃ॥ ಗಳಿಲನೆ ಪೊಣ್ಮುವೀ ಪಟಹಶಂಖಮೃದಂಗಸುಮಂಗಳಾ
ರವಂ। ಪೊಳಲಿನ ಮಾಡಗಳ್ ಕುಡಿದು ಕಾರಿದವೋಲ್
ಪಿರಿದಾಗಿ ಕೇಳ್ವರಂ। ಬಳಲಿಸಿ ಸಾರವಿಲ್ಲದಿಹ ಕರ್ಣವ
ಘೂರ್ಮಿಸುತ್ತೆ ಕೌತುಕಂ। ದಳೆದು ದಿಶಾಂತವಿಸ್ಮೃತಿಯ
ನೋಡೆ ತೆರಳ್ವುದೆಂದು ಶಂಕಿಪೆಂ (ಎಂದು ಯೋಚಿಸಿ)

ಆಹಾ! ತಿಳಿಯಿತು. ಇದು ಮಲಯಕೇತುವನ್ನು ಹಿಡಿದುದರಿಂದ ರಾಜಕುಲಕ್ಕೆ (ಎಂದರ್ಧೋಕ್ತಿಯಲ್ಲಿ ಅಸೂಯೆಯಿಂದ) ಮೌರ್ಯಕುಲಕ್ಕುಂಟಾದ ಸಂತೋಷಾತಿಶಯವನ್ನು ಸೂಚಿಸುವುದು. (ಕಂಬನಿಗರೆದು)

ಕಂ॥ ಅರಿಮುತವುಂ ಕೇಳಿಸಿದುದು।
ಭರದಿಂದಭಿನಯಿಸಿ ತೋರಿಸಿದುದೆನಗೆಲ್ಲಂ ॥
ಅರಿದಪೆನಾ ವಿಧಿ ಯೆನ್ನಂ।
ತುರಿಹದೊಳನುಭವಿಸುವಂತೆ ಯತ್ನಿಕುಮೆನುತಂ।

ಪುರುಷಂ—(ಸ್ವಗತಂ) ಈತನು ಕುಳಿತುಕೊಂಡನು. ಆರ್ಯಚಾಣಕ್ಯನಾಜ್ಞೆ ಯನ್ನು ನೆರವೇರಿಸುವನು. (ಎಂದು ರಾಕ್ಷಸನ ಮುಖವನ್ನು ನೋಡದವನಂತೆ ಅವನ ಮುಂದುಗಡೆಯಲ್ಲಿ ಕೊರಲಿಗೆ ನೇಣುಹಾಕಿಕೊಳ್ಳುವನು.)

ರಾಕ್ಷ—(ನೋಡಿ ಆತ್ಮಗತಂ) ಆಹಾ! ಇದೇನು ನನ್ನಂತೆ ದುಃಖಿಯೂ ದೀನನೂ ಆಗಿರುವ ಇವನು ನೇಣುಹಾಕಿಕೊಳ್ಳುತ್ತಿರುವನು. (ಪ್ರಕಾಶಂ) ಭದ್ರನೆ! ಏಕೆ ಹೀಗೆಮಾಡುವೆ?

ಪುರು—(ಕಂಬನಿಗರೆದು) ಆರ್ಯನೆ! ಪ್ರಿಯಮಿತ್ರನ ನಾಶದಿಂದ ದುಃಖಿತ ನಾದ ನನ್ನಂತಹ ಮಂದಭಾಗ್ಯನು ಇನ್ನೇನು ಮಾಡುವನು?

ರಾಕ್ಷ—(ಸ್ವಗತಂ) ಈತನು ನನ್ನಂತೆಯೇ ದುಃಖಿಯೂ ದೀನನೂ ಆಗಿರುವ ನೆಂದು ನಾನು ಮೊದಲೇ ತಿಳಿದೆನು. ಆಗಲಿ ಇವನನ್ನು ಕೇಳುವೆನು, (ಪ್ರಕಾಶಂ) ಎಲೈ ಸಮದುಃಖಿಯೆ! ನಿನ್ನ ವೃತ್ತಾಂತವು ರಹಸ್ಯವೂ ಅತಿವಿಸ್ತರವೂ ಅಲ್ಲದಿದ್ದರೆ ಅದನ್ನು ಕೇಳಲಪೇಕ್ಷಿಸುವೆನು. ನಿನ್ನ ಪ್ರಾಣತ್ಯಾಗಕ್ಕೆ ಕಾರಣವೇನು?

ಪುರು—ಆರ್ಯನೆ! ರಹಸ್ಯವೂ ಅಲ್ಲ. ವಿಸ್ತರವೂ ಅಲ್ಲ. ಆದರೆ ಪ್ರಿಯ ಮಿತ್ರವಿನಾಶದಿಂದ ದುಃಖಿತ ಹೃದಯನಾದ ನಾನು ಎಷ್ಟುಮಾತ್ರವೂ ಮರಣಕ್ಕೆ ಕಾಲಹರಣವನ್ನು ಮಾಡಲಾರೆನು.

ರಾಕ್ಷ—(ನಿಟ್ಟುಸಿರು ಬಿಟ್ಟು) (ಸ್ವಗತಂ) ಕಷ್ಟವು. ಈ ಸುಹೃದ್ವ್ಯಸನದಲ್ಲಿ ಅನ್ಯರಂತೆ ಉದಾಸೀನರಾದ ನಮ್ಮನ್ನು ಇವನು ಹಳಿಯುತ್ತಿರುವನು. (ಪ್ರಕಾಶಂ) ಅಯ್ಯಾ! ರಹಸ್ಯವೂ ವಿಸ್ತರವೂ ಅಲ್ಲದಿದ್ದರೆ ಕೇಳಲಪೇ ಕ್ಷಿಸುವೆನು. ದುಃಖಕಾರಣವನ್ನು ಹೇಳು.

ಪುರು— ಅಕಟಾ! ಆರ್ಯನು ನಿರ್ಬಂಧಪಡಿಸುವನಲ್ಲಾ! ಏನುಗತಿ? ಇದೊ ತಿಳುಹುವೆನು. ಈ ಪಟ್ಟಣದಲ್ಲಿ ವಿಷ್ಣುದಾಸನೆಂಬ ರತ್ನವ್ಯಾ ಪಾರಿಯುಂಟು.

ರಾಕ್ಷ—(ಆತ್ಮಗತಂ) ಅಹುದು ಚಂದನದಾಸನ ಮಿತ್ರನಾದ ವಿಷ್ಣುದಾಸ ನೆಂಬುವನುಂಟು. (ಪ್ರಕಾಶಂ) ಆತನಿಗೇನು ?

ಪುರು—ಆತನು ನನಗೆ ಪ್ರಿಯಮಿತ್ರನು.

ರಾಕ್ಷ—(ಸಂತೋಷದಿಂದ ಆತ್ಮಗತ) ಓಹೋ! ಪ್ರಿಯಮಿತ್ರನೆಂದು ಹೇಳುತ್ತಾನೆ. ಸಂಬಂಧವು ಬಹಳ ಹತ್ತಿರಕ್ಕೆ ಬಂದಿತು. ಭಾವು! ಇವನು ಚಂದನದಾಸನ ವೃತ್ತಾಂತವನ್ನು ತಿಳಿದಿರಬಹುದು. (ಪ್ರಕಾಶಂ) ಭದ್ರನೆ! ಆತನಿಗೇನು ?

ಪುರು—ಆತನೀಗ ತನ್ನ ಆಭರಣಾದಿ ಸಕಲ ವಿಭವವನ್ನೂ ಒಡವರಿಗೆ ದಾನ ಮಾಡಿ ಅಗ್ನಿಯನ್ನು ಪ್ರವೇಶಿಸಬೇಕೆಂದು ಪಟ್ಟಣದಿಂದ ಹೊರಟುಹೋದನು. ಆತನ ವಿಷಯದಲ್ಲಿ ಕೇಳಬಾರದುದನ್ನು ಕೇಳದಿರುವಷ್ಟರಲ್ಲಿಯೇ ನಾನೂ ನೇಣುಹಾಕಿಕೊಂಡು ಸಾಯಬೇಕೆಂದು ಈ ಜೀರ್ಣೋದ್ಯಾನಕ್ಕೆ ಬಂದೆನು.

ರಾಕ್ಷ—ಅಯ್ಯಾ! ನಿನ್ನ ಮಿತ್ರನು ಅಗ್ನಿಪ್ರವೇಶವನ್ನು ಮಾಡುವುದಕ್ಕೆ ಕಾರಣವೇನು ?

ವೃ|| ಪಿರಿದೆನಿಪೌಷಧಕ್ಕೆ ವಶನಾಗದ ರೋಗ ಮದೇನಡ
ರ್ದುದೊ ?

ಪುರು—ಆರ್ಯನೆ! ಇಲ್ಲ. ಇಲ್ಲ.

ರಾಕ್ಷ—ವೃ|| ತಿರೆಯರಸಂ ವಿಷಾಗ್ನಿ ಸದೃಶೋತ್ಕಟ ಕೋಪನೊ
ಳೇಂ ತೆರಳ್ದಿದಂ ?

ಪುರು—ಶಿವ-ಶಿವ ಆರ್ಯನೆ! ಚಂದ್ರಗುಪ್ತನ ದೇಶದಲ್ಲಿ ಕ್ರೌರ್ಯಪ್ರಸಕ್ತಿಯೇ ಇಲ್ಲ.

ರಾಕ್ಷ—ವೃ|| ಅರಿದೆನಿಪನ್ಯ ಕಾಂತೆಯರೊಳೇಂ ಮನವಿಟ್ಟನೊ?
ಕಾಮಚಾರದಿಂ.

ಪುರು—(ಕಿವಿಗಳನ್ನು ಮುಚ್ಚಿಕೊಂಡು) ಶಿವ-ಶಿವ ಆರ್ಯನೆ! ಈ ಕೆಟ್ಟ ನಡವಳಿಯು ವಿನಯನಿಧಿಗಳಾದ ವಣಿಗ್ಜನರಲ್ಲಿಯೇ ಇಲ್ಲ. ಇನ್ನು ವಿಷ್ಣುದಾಸನಲ್ಲಿ ಹೇಳುವುದೇನು?

ರಾಕ್ಷ—ವೃ|| **ಅರರೆ! ಸುಹೃದ್ವಿನಾಶಮುದು ನಿನ್ನವೊಲಾ ಕೆಳೆಯಂಗೆ ಹೇತುವೇಂ?**

ಪುರು—ಆರ್ಯನೆ! ಅಹುದು

ರಾಕ್ಷ—(ದುಃಖದಿಂದ ಆತ್ಮಗತಂ) ಸ್ನೇಹಪಕ್ಷಪಾತಿಯಾದ ನನ್ನ ಹೃದಯವು ನಡುಗುತ್ತಿರುವುದರಿಂದ ಚಂದನದಾಸನ ಪ್ರಿಯಮಿತ್ರನು ಎಂಬುದು, ಅಗ್ನಿಪ್ರವೇಶವನ್ನು ಮಾಡುವುದಕ್ಕೆ ಆತನ ವಿನಾಶವೇ ಕಾರಣವೆಂಬುದೂ ದಿಟ. (ಪ್ರಕಾಶಂ) ಆ ವಿಷ್ಣುದಾಸನ ಮಿತ್ರನ ವಿನಾಶವನ್ನೂ, ಪ್ರಿಯಸಖನಲ್ಲಿ ವಾತ್ಸಲ್ಯದಿಂದ ಮರಣಕ್ಕೆ ಸಿದ್ಧನಾದ ವಿಷ್ಣುದಾಸನ ಚರಿತ್ರೆಯನ್ನೂ ವಿಸ್ತರದಿಂದ ಕೇಳಲಪೇಕ್ಷಿಸುವೆನು.

ಪುರು—ಮಂದಭಾಗ್ಯನಾದ ನಾನು ಇನ್ನು ಮುಂದೆ ಮರಣಕ್ಕೆ ವಿಘ್ನವನ್ನು ಮಾಡಿಕೊಳ್ಳಲಾರೆನು.

ರಾಕ್ಷ—ಅಯ್ಯಾ! ಕೇಳಬೇಕಾದ ಕಥೆಯನ್ನು ಹೇಳು.

ಪುರು—ಏನುಗತಿ? ಏನುಮಾಡಲಿ? ಇದೋ ತಿಳುಹುವೆನು. ಆರ್ಯನು ಕೇಳಬೇಕು.

ರಾಕ್ಷ— ಸಿದ್ಧನಾಗಿರುವೆನು.

ಪುರು— ಈ ಪಟ್ಟಣದಲ್ಲಿ ಚಂದನದಾಸನೆಂಬ ರತ್ನವ್ಯಾಪಾರಿಯುಂಟೆಂಬುದನ್ನು ಆರ್ಯನು ತಿಳಿದಿರಬಹುದು.

ರಾಕ್ಷ—(ದುಃಖದಿಂದ ಆತ್ಮಗತಂ) ದೈವವು ನನ್ನ ವಿನಾಶದೀಕ್ಷೆಯ ಬಾಗಿಲನ್ನು ತೆರೆಯಿತು. ಹೃದಯವೇ! ಸ್ಥಿರವಾಗಿರು. ನಿನಗೆ ಕೇಳಲು

ಕಷ್ಟವಾಗಿರುವುದು ಯಾವುದುಂಟು? (ಪ್ರಕಾಶಂ) ಭದ್ರನೆ! ಅಹುದು. ಮಿತ್ರವತ್ಸಲನೆಂದೂ ಸಾಧುವೆಂದೂ ಕೇಳಿರುವೆನು. ಆತನಿಗೇನು?

ಪುರು— ಆತನು ಈ ವಿಷ್ಣುದಾಸನಿಗೆ ಪ್ರಿಯಮಿತ್ರನಾಗಿರುವನು.

ರಾಕ್ಷ—(ಸ್ವಗತಂ) ಇದೊ ಹೃದಯಕ್ಕೆ ಅತ್ಯಂತವಾದ ಶೋಕವಜ್ರಪಾತವು ಸಮಿಾಪಿಸಿತು. (ಪ್ರಕಾಶಂ) ಆಮೇಲಾಮೇಲೆ?

ಪುರು—ಆಮೇಲೆ ವಿಷ್ಣುದಾಸನು ಮಿತ್ರಸ್ನೇಹಾನುಗುಣವಾಗಿ ಇಂದು ಚಂದ್ರಗುಪ್ತನನ್ನು ಬೇಡಿಕೊಂಡನು.

ರಾಕ್ಷ—ಏನೆಂದು? ಹೇಳು.

ಪುರು—"ಸ್ವಾಮಿಯೇ! ನಮ್ಮ ಮನೆಯಲ್ಲಿ ಕುಟುಂಬಭರಣಕ್ಕೆ ತಕ್ಕಷ್ಟು ಸಂಪದವು ಇರುವುದು. ಅದನ್ನೊಪ್ಪಿಸಿಕೊಂಡು ಪ್ರಿಯಮಿತ್ರನಾದ ಚಂದನದಾಸನನ್ನು ಬಿಡಬೇಕು" ಎಂದು

ರಾಕ್ಷ—(ಆತ್ಮಗತಂ) ಭಾಪು ವಿಷ್ಣುದಾಸನೆ! ಭಾಪು! ಆಹಾ! ಮಿತ್ರ ಸ್ನೇಹವನ್ನು ಚೆನ್ನಾಗಿ ತೋರಿಸಿದೆ.

ಏಕೆಂದರೆ? ವೃ|| ಪುಡುಹುವರಾವ ಲೋಭದೆ ಸುತರ್ಪಿತನಂ ಪಿತ
ನಾ ಸುತರ್ಕಳಂ| ಬಿಡದೊಡನಿರ್ಪ ನೇಹಿಗರು
ಮಾವುದರಿಂ ಪಗೆಗೊಂಬರಿರ್ವರುಂ|| ಬಿಡುತತಿ
ದುಃಖದಂತೆ ತಿಳಿದಾ ಧನಮಂ ಪ್ರಿಯಮಾದೊ
ಡಂ ಜಸಂ| ಬಡೆದಪೆಯಲ್ತೆ ನೀಂ ವಣಿಜನಾಗಿ
ಯುಂ ಮಾಧನಮೇ ಕೃತಾರ್ಥನೈ ||

(ಪ್ರಕಾಶಂ) ಆಮೇಲೆ ಹಾಗೆ ಹೇಳಿದುದನ್ನು ಮೌರ್ಯನು ಸಮ್ಮತಿಸಿದನೊ?

ಪುರು—ಅನಂತರದಲ್ಲಿ ಮೌರ್ಯನು ವಿಷ್ಣುದಾಸನನ್ನು ಕುರಿತು, "ನಾನು ಧನಕ್ಕಾಗಿ ಚಂದನದಾಸನನ್ನು ಸೆರೆಗೊಳಿಸಲಿಲ್ಲ. ಇವನು ಅಮಾತ್ಯನ

ಮನೆಯವರನ್ನು ಮರೆಮಾಚಿರುವನು. ಬಹಳ ವಿಧವಾಗಿ ನಾವು ಕೇಳಿಕೊಂಡರೂ ಅವರನ್ನು ತಂದೊಪ್ಪಿಸಲಿಲ್ಲ. ಆದುದರಿಂದ ಈಗಲಾದರೂ ಅವರನ್ನೊಪ್ಪಿಸುವುದಾದರೆ ಇವನಿಗೆ ಬಿಡುಗಡೆಯುಂಟು. ಇಲ್ಲವಾದರೆ ಇತರ ಜನರುಕೂಡ ಹೀಗೆ ಮಾಡದಿರುವುದಕ್ಕಾಗಿ ಇವನಿಗೆ ಪ್ರಾಣಾಂತವಾದ ಶಿಕ್ಷೆಯೇ ಸರಿ" ಎಂದು ಹೇಳಿ ಚಂದನದಾಸನನ್ನು ವಧ್ಯಸ್ಥಾನಕ್ಕೆ ಕಳುಹಿದನು. ಅನಂತರದಲ್ಲಿ ವಿಷ್ಣುದಾಸ ಸೆಟ್ಟಿಯು ಚಂದನದಾಸನ ವಿಷಯದಲ್ಲಿ ಕೇಳಬಾರದುದನ್ನು ಕೇಳದಿರುವಷ್ಟರಲ್ಲಿಯೇ ಅಗ್ನಿಯನ್ನು ಪ್ರವೇಶಿಸುವೆನೆಂದು ಪಟ್ಟಣದಿಂದ ಹೊರಟು ಹೋದನು. ನಾನೂ ವಿಷ್ಣುದಾಸನ ವಿಷಯವಾಗಿ ಕೇಳಬಾರದುದನ್ನು ಕೇಳುವುದಕ್ಕೆ ಮುಂಚೆಯೇ ನೇಣುಹಾಕಿಕೊಂಡು ಸಾಯುವೆನೆಂದು ಈ ಜೀರ್ಣೋದ್ಯಾನಕ್ಕೆ ಬಂದೆನು.

ರಾಕ್ಷ—ಭದ್ರನೆ! ಚಂದನದಾಸನನ್ನು ಕೊಲ್ಲಲಿಲ್ಲವಷ್ಟೆ?

ಪುರು—ಇನ್ನೂ ಇಲ್ಲ. ಈಗಲೂಕೂಡ ಅಮಾತ್ಯನ ಮನೆಯವರನ್ನು ಒಪ್ಪಿಸೆಂದು ಅಡಿಗಡಿಗೂ ಅವನನ್ನು ಕೇಳುತ್ತಿರುವರು. ಆದರೆ ಅವನು ಮಿತ್ರವಾತ್ಸಲ್ಯದಿಂದ ಒಪ್ಪಿಸುವುದಿಲ್ಲ. ಆದುದರಿಂದ ಅವನ ಮರಣಕ್ಕೆ ಕೊಂಚ ಕಾಲಹರಣವಾಗುವುದು.

ರಾಕ್ಷ—(ಸಂತೋಷದಿಂದ ಆತ್ಮಗತಂ) ಭಾಪು! ಮಿತ್ರಚಂದನದಾಸನೆ! ಭಾಪು!

ಕಂ|| ಶರಣಾಗತ ಪಾಲನದಿಂ |
ಧರಾಧಿಪತಿ ಶಿಬಿಯ ತೆರದೆ ಸಖ ನಿಲ್ಲದೆ ನೀಂ |
ಉರುತರ ಕೀರ್ತಿಯ ನೊರ್ವನೆ |
ಧರೆಯೊಳ್ ಗಳಿಸಿದಪೆಯಲ್ತೆ! ಪಾವನಚರಿತ! ||

(ಪ್ರಕಾಶಂ) ಭದ್ರನೆ! ನಡೆ ನಡೆ. ಈಗಲೇ ಬೇಗ ವಿಷ್ಣುದಾಸನನ್ನು ಅಗ್ನಿಪ್ರವೇಶದಿಂದ ತಪ್ಪಿಸು. ನಾನೂ ಚಂದನದಾಸನನ್ನು ಮರಣದಿಂದ ಬಿಡಿಸುತ್ತೇನೆ.

ಪುರು—ಆದರೆ ಆರ್ಯನು ಯಾವ ಉಪಾಯದಿಂದ ಚಂದನದಾಸನನ್ನು ಮರಣದಿಂದ ಬಿಡಿಸುವನು ?

ರಾಕ್ಷ—(ಖಡ್ಗವನ್ನು ಸೆಳೆದು) ಇದೊ ! ಪೌರುಷಸಹಕಾರಿಯಾದ ಈ ಖಡ್ಗ ದಿಂದಲೇ. ಇದೋ ನೋಡು—

ವೃ॥ ಕಡುಗವಿದಂಬು ತುಂಬಿದ ಮುಗಿಲ್ವಡೆದಂಬರದಂತೆ ನೈ
ಲ್ಯಮಂ। ಪಡೆದು ನಿಯುದ್ಧಕೌತುಕದೆ ಕಂಟಕಿತಂಬೊ
ಲಡಂಗಿ ಕೈಯೊಳು ॥ ಗ್ಗಡಿಸುತ ರಾತಿಗಳ್ಗೆ ರಣಶಾಣದೊ
ಳಿನ್ನ ಪೊಡಪುರ್ದೋರಿ ಮುಂ। ದಡಿಯಿಡುವಂತೆ ಸಾಹ
ಸವ ನಿತ್ತಪುದೀಗಳೆ ಮಿತ್ರನೊಲ್ಮೆಯಿಂ ॥

ಪುರು—ಆರ್ಯನೆ ! ಇಂತಹ ದುರವಸ್ಥೆಯಲ್ಲಿರುವ ನಾನು ಚಂದನದಾಸನ ಪ್ರಾಣಸಂರಕ್ಷಣೆಯನ್ನು ಸೂಚಿಸುತ್ತಿರುವ ನಿಮ್ಮನ್ನು ಸರಿಯಾಗಿ ಗುರುತುಹಿಡಿದು ನಿಶ್ಚಯಿಸಲಾರೆನು ಆದರೆ ತಾವು ಪ್ರಖ್ಯಾತನಾಮ ಧೇಯರಾದ ಅಮಾತ್ಯರಾಕ್ಷಸರೇ ? ದೈವಯೋಗದಿಂದ ತಮ್ಮನ್ನು ಕಂಡೆನು. (ಎಂದು ಕಾಲಿಗೆರಗುವನು)

ರಾಕ್ಷ—ಏಳು. ಏಳು. ಈಗ ಕಾಲಹರಣವನ್ನು ಮಾಡಬೇಡ. ಈ ರಾಕ್ಷ ಸನು ಚಂದನದಾಸನನ್ನು ಮರಣದಿಂದ ಬಿಡಿಸುವನೆಂದು ವಿಷ್ಣುದಾಸ ನಿಗೆ ತಿಳುಹಿಸು. (ಎಂದು 'ಕಡುಗವಿದಂಬುತುಂಬಿದ' ಎಂಬ ಪದ್ಯವನ್ನು ಹೇಳುತ್ತಾ ಕತ್ತಿಯನ್ನು ಹಿರಿದು ಹೊರಡುವನು.)

ಪುರು—ಆರ್ಯನೆ ! ನನಗೆ ಸಂಶಯವಿಲ್ಲದಂತೆ ಅನುಗ್ರಹವನ್ನು ಮಾಡಬೇಕು.

ರಾಕ್ಷ—ಸ್ವಾಮಿವಿನಾಶವನ್ನು ಅನುಭವಿಸಿ ಮಿತ್ರವಿನಾಶಕ್ಕೆ ಕಾರಣವಾಗಿ ದುರ್ನಾಮವನ್ನು ಪಡೆದ ನೀಚನಾದ ಆ ರಾಕ್ಷಸನೆಂಬುವನು ಯಥಾ ರ್ಥವಾಗಿ ನಾನೇ.

ಪುರು—(ಸಂತೋಷದಿಂದ ಕಾಲಿಗೆರಗಿ) ಆಶ್ಚರ! ಆಶ್ಚರ! ದೈವಯೋಗದಿಂದ ಕಂಡೆನು. ಅಮಾತ್ಯರು ಪ್ರಸನ್ನರಾಗಬೇಕು. ಇಲ್ಲಿ ಮೊದಲು

ಚಂದ್ರಗುಪ್ತಹತಕನು ಆರ್ಯ ಶಕಟದಾಸನನ್ನು ವಧ್ಯಸ್ಥಾನಕ್ಕೆ ಕಳು ಹಿಸಿದನು. ಅವನನ್ನು ಯಾವನೋ ವಧ್ಯಸ್ಥಾನದಿಂದ ಅಪಹರಿಸಿ ದೇಶಾಂತರಕ್ಕೆ ಸಾಗಿಸಿಕೊಂಡು ಹೋದನು. ಅನಂತರದಲ್ಲಿ ಚಂದ್ರ ಗುಪ್ತ ಹತಕನು ಈ ಪ್ರಮಾದವು ಯಾರಿಂದ ನಡೆಯಿತೆಂದು ಕುಪಿತನಾಗಿ ಆರ್ಯ ಶಕಟದಾಸನ ವಿಷಯದಲ್ಲಿ ಉರಿಯುತ್ತಿದ್ದ ಕ್ರೋಧಾಗ್ನಿಯನ್ನು ಘಾತಕಜನರ ಸಂಹಾರಜಲದಿಂದ ಶಾಂತಿಗೊಳಿಸಿದನು. ಅಂದು ಮೊದಲು ಘಾತಕರು ಬಹಳ ಜಾಗರೂಕರಾಗಿ ಶಸ್ತ್ರವನ್ನು ಹಿಡಿದುಕೊಂಡುಬರುವ ಹೊಸಬನನ್ನು ಹಿಂದುಗಡೆಯಾಗಲಿ ಮುಂದುಗಡೆಯಾಗಲಿ ಕಂಡ ಕೂಡಲೆ ತಮ್ಮ ಪ್ರಾಣವನ್ನು ಕಾಪಾಡಿಕೊಳ್ಳುವುದಕ್ಕಾಗಿ ವಧ್ಯ ಸ್ಥಾನದಲ್ಲಿರುವ ವಧ್ಯನನ್ನು ಕೊಲ್ಲುವರು. ಹೀಗಿರುವುದರಿಂದ ಅಮಾ ತ್ಯರು ಶಸ್ತ್ರವನ್ನು ಹಿಡಿದುಕೊಂಡು ಹೋದಕೂಡಲೇ ಚಂದನದಾಸ ನನ್ನು ಶೀಘ್ರವಾಗಿ ಸಂಹರಿಸುವರು.

ರಾಕ್ಷ—ಆಹಾ ! ಆ ಚಾಣಕ್ಯವಟುವಿನ ತಂತ್ರವು ತಿಳಿಯಲಸಾಧ್ಯವು.

ವೃ॥ ಶಕಟನರಾತಿ ಸಮ್ಮತಿಯೊಳೆನ್ನೆಡೆ ಗೈದಿದನೆಂದೊಡಾ ನೃ
ಪಾ। ಲಕ ವೃಷಲಂ ರುಷಂಬಡೆದು ಘಾತಕರಂ ಮಡುಹ
ಲ್ಕದೇಂ ಕತಂ? ॥ ಅಕುಟಿಲನಾದೊಡಾ ಶಕಟ ನಂತಹ
ಪಾಪಮನೆಂತು ಚಿಂತಿಪಂ ?। ವಿಕಲತೆಯೊಂದು ತೀಪರಿ
ವಿಚಾರಿಪ ಚಿತ್ತಕೆ ತೋರದಾವುದುಂ ॥ (ಎಂದು ಯೋಚಿಸಿ)

ವೃ॥ ಕಡಿದಪೆ ನೆಲ್ಲಘಾತಕರನೆಂದೊಡೆ ಖಡ್ಗಕಿದಲ್ಲ ವೇಳೆ ತಾಂ।
ಕೊಡುವದು ನೀತಿ ಯಾಬಳಿಕ ತತ್ಫಲಮುಂ ಫಲಮೇಂ
ವಿಚಾರಿಸಲ್ ॥ ಪಡೆದಿರಲೆನ್ನ ಕಾರಣದೆ ಮಿತ್ರನದಾಪರಿ
ಘೋರ ಕಷ್ಟಮುಂ। ಬಿಡುವುದು ಯುಕ್ತಮಲ್ತದಕೆ
ನನ್ನೊಡಲಂ ಪಡಿಯಾಗಿ ಕೊಟ್ಟಪೆಂ ॥

(ಎಂದೆಲ್ಲರೂ ಹೊರಟುಹೋದರು.)

## — ಷಷ್ಠಾಂಕಂ ಸಂಪೂರ್ಣಂ —

# ಸತ್ಯವಾಂಕಂ



(ಅನಂತರದಲ್ಲಿ ಚಂಡಾಲನು ಪ್ರವೇಶಿಸುವನು.)

ಚಂಡಾ—ಹಿಂದಕ್ಕೆ ತೆರಳಿರಿ! ಹಿಂದಕ್ಕೆ ತೆರಳಿರಿ.

ಕಂ|| ಸಿರಿಯುಂ ಸತಿಯುಂ ಕುಲಮುಂ |
ಹರಣಗಳಂ ಪೊರೆಯ ಲೆಳಸಿದೊಡೆ ವಸುಮತಿಯೊಳ್||
ಪರಿಹರಿಪುದು ದೂರದೊಳು |
ರ್ವರೆಯಾಣ್ಮ ಗಪಥ್ಯಮೆನಿಪುದಂ ಜನರೆಲ್ಲಂ|| ಮತ್ತಂ
ಪುರುಷ ನಪಥ್ಯಮನೆಸಗಲ್ |
ಪಿರಿದಹ ರುಜೆಯೊಡನೆ ಬರ್ಪುದಥವಾ ಮರಣಂ ||
ಚರಿಸಲ್ ರಾಜಾಪಥ್ಯಮ |
ನರರೆ ಕುಲಂ ಸಕಲಮುಂ ವಿನಾಶಂ ಬಡೆಗುಂ ||

ಇದನ್ನು ನೀವು ನಂಬದಿದ್ದರೆ ರಾಜಾಪಥ್ಯವನ್ನು ಮಾಡಿದ ಈ ಚಂದನದಾಸ ಸೆಟ್ಟಿಯನ್ನು ಹೆಂಡಿರುಮಕ್ಕಳೊಡನೆ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವುದನ್ನು ನೋಡಿರಿ. (ಆಕಾಶದಲ್ಲಿ ಕಿವಿಗೊಟ್ಟು) ಅಯ್ಯಾ! ಏನುಕೇಳುವಿರಿ? "ಇವನನ್ನು ಬಿಡುವುದಕ್ಕೇನಾದರೂ ಉಪಾಯವುಂಟೇ?" ಎಂದೊ? ಅಯ್ಯಾ ಉಂಟು. ಅಮಾತ್ಯನ ಮನೆಯವರನ್ನು ಒಪ್ಪಿಸುವುದೇ ಮೋಕ್ಷೋಪಾಯವು (ತಿರುಗಿ ಆಕಾಶದಲ್ಲಿ ಕಿವಿಗೊಟ್ಟು) ಅಯ್ಯಾ ಏನುಹೇಳುವಿರಿ? "ಶರಣಾಗತವತ್ಸಲನಾದ ಈತನು ತನ್ನ ಜೀವಿತಮಾತ್ರಕ್ಕಾಗಿ ಇಂತಹ ಅಕಾರ್ಯವನ್ನು ಮಾಡಲಾರನು" ಎಂದೊ? ಹಾಗಾದರೆ ಇವನು ಅನುಭವಿಸುವ ಗತಿಯನ್ನು ನೀವೇ ತಿಳಿದುಕೊಳ್ಳಿರಿ. ಈಗ ಇಷ್ಟೇ ನಿಮ್ಮ ಪ್ರತೀಕಾರವು.

(ಅನಂತರದಲ್ಲಿ ವಧ್ಯವೇಷಧಾರಿಯಾದ ಚಂದನದಾಸನು ಭುಜದ ಮೇಲೆ ಶೂಲವನ್ನಿಟ್ಟು ಕೊಂಡು ಪತ್ನೀಪುತ್ರರಿಂದೊಡಗೂಡಿ ಎರಡನೆಯ ಚಂಡಾಲನೊಡನೆ ಪ್ರವೇಶಿಸುವನು.)

ಚಂದನ—(ಕಂಬನಿಗರೆದು) ಹಾ! ಹಾ! ನಿಂದಿಸು. ನಿಂದಿಸು.

ಕಂ|| ಚಾರಿತ್ರಭಂಗಕನಿಶಂ |
ಭೀರುಗಳಾದೆಮ್ಮ ತೆರದ ಸುಜನಂಗಳುಮಂ ||
ಚೋರಜನರ್ಗಣಿ ಗೊಳಿಸುವ |
ಮಾರಣಕೀಡಾಗಿಸಿರ್ಪ ಜವಗೆರಗುವೆನಾಂ ||

ಅಥವಾ ಘಾತಕರಿಗೆ ಉದಾಸೀನರಲ್ಲಿಯಾಗಲೀ ಇತರರಲ್ಲಿಯಾಗಲೀ ಭೇದವಿರುವುದಿಲ್ಲ. ಏಕೆಂದರೆ ?

ಕಂ|| ತಲ್ಲಣಿಸಿ ಮರಣಭಯದಿಂ |
ದೊಲ್ಲದೆ ಮಾಂಸಮನೆ ತೊರೆದು ಪುಲ್ಗಳನೊಲವಿಂ ||
ಮೆಲ್ಲುತೆ ಬದುರ್ಕುವ ಪುಲ್ಲೆಯ |
ಕೊಲ್ಲುವ ಭಿಲ್ಲರ್ಗೆ ಕರುಣೆಯೇಂ ಸಮನಿಕುಮೆ ? ||

(ಸುತ್ತಲೂ ನೋಡಿ) ಆಹಾ ! ಪ್ರಿಯಮಿತ್ರನಾದ ವಿಷ್ಣುದಾಸನೆ ! ನೀನು ಏಕೆ ನನಗೆ ಪ್ರತ್ಯುತ್ತರವನ್ನು ಕೊಡುವುದಿಲ್ಲ ? ಅಥವಾ ಈ ಕಾಲದಲ್ಲಿ ಯಾವ ಜನರೂ ಕಾಣಿಸಿಕೊಳ್ಳಲಾರರಲ್ಲವೆ ? (ಕಂಬನಿಗರೆದು) ಈ ನನ್ನ ಪ್ರಿಯಮಿತ್ರರೆಲ್ಲರೂ ಕಣ್ಣೀರಿನಿಂದಲೇ ತರ್ಪಣವನ್ನು ಮಾಡುತ್ತ, ತಮ್ಮ ಶರೀರಗಳಿಂದ ಹಿಂದಿರುಗಿ, ದುಃಖದಿಂದ ಮುಖಮಂ ಬಳಲಿಸಿಕೊಂಡು, ಕಂಬನಿಗರೆವ ನೋಟದಿಂದಲೇ ನನ್ನನ್ನು ಅನುಸರಿಸುತ್ತಿರುವರು.

(ಎಂದು ಹೊರಡುವನು.)

ಚಂಡಾ—ಆರ್ಯ ಚಂದನದಾಸನೆ ! ಇದೋ ! ವಧ್ಯಸ್ಥಾನಕ್ಕೆ ಬಂದಿರುವೆ, ಇನ್ನು ಪರಿಜನರನ್ನು ಕಳುಹಿಸು.

ಚಂದನ—ಪ್ರಿಯೆ! ನೀನೀಗ ಪುತ್ರನೊಡನೆ ಹಿಂದಕ್ಕೆ ತೆರಳು. ಇದು ವಧ್ಯಸ್ಥಾನವಲ್ಲವೆ? ಇನ್ನು ಮುಂದೆ ಹಿಂಬಾಲಿಸುವುದು ಯುಕ್ತವಲ್ಲ.

ಹೆಂಡತಿ—ಆರ್ಯನು ಪರಲೋಕಕ್ಕೆ ಹೊರಟಿರುವನೇ ಹೊರತು ದೇಶಾಂತರಕ್ಕಲ್ಲವಾದುದರಿಂದ ಈಗ ಕುಲಜನವು ಹಿಂದಿರುಗುವುದು ಯೋಗ್ಯವಲ್ಲ.

ಚಂದನ—ಆರ್ಯೆ! ದಿಟ. ಆದರೆ ಈ ನನ್ನ ವಿನಾಶವು ಮಿತ್ರಕಾರ್ಯಕ್ಕಾಗಿಯೇಹೊರತು ಪುರುಷದೋಷದಿಂದಲ್ಲ. ಆದಕಾರಣ ಸಂತೋಷಿಸಬೇಕಾದಾಗಲೂ ಚಿಂತಿಸುವುದೇಕೆ?

ಹೆಂಡತಿ—ಆರ್ಯನೆ? ಹೀಗಾದರೆ ಮನೆಯವರು ಹಿಂದಿರುಗುವುದಕ್ಕಿದು ಕಾಲವಲ್ಲವಷ್ಟೆ!

ಚಂದನ—ಪ್ರಿಯೆ! ಅಹುದು. ನೀನಿದ್ದು ಮಾಡುವುದೇನು?

ಹೆಂಡತಿ—ಪತಿಪದವನ್ನು ಅನುಸರಿಸಿ ಧನ್ಯಳಾಗುವೆನು.

ಚಂದನ—ಆರ್ಯೆ! ಈ ಪ್ರಯತ್ನವು ಒಳ್ಳೆಯದಲ್ಲ. ನೀನು ಲೋಕವ್ಯವಹಾರವನ್ನು ಅರಿಯದ ಬಾಲನಾದ ಪುತ್ರನನ್ನು ಸಲಹಬೇಕು,

ಹೆಂಡತಿ—ಪೂಜ್ಯರಾದ ಕುಲದೇವತೆಗಳು ಪ್ರಸನ್ನರಾಗಿ ಇವನನ್ನು ಅನುಗ್ರಹಿಸಲಿ. ಮಗುವೆ! ಇದೇ ಕಡೆ. ತಂದೆಯ ಕಾಲಿಗೆ ಬೀಳು.

ಪುತ್ರ—(ಕಾಲಿಗೆ ಬಿದ್ದು) ತಂದೆಯೇ! ಪಿತೃವಿಯೋಗವನ್ನು ಪಡೆದ ನಾನಿನ್ನು ಏನುಮಾಡಲಿ?

ಚಂದನ—ಮಗುವೆ! ಚಾಣಕ್ಯನಿಲ್ಲದ ದೇಶದಲ್ಲಿ ವಾಸಮಾಡು.

ಚಂಡಾ—ಆರ್ಯ ಚಂದನದಾಸನೆ! ಶೂಲವನ್ನು ನಟ್ಟದ್ದು ಆಯಿತು. ಆದುದರಿಂದ ಸಿದ್ಧನಾಗು.

ಹೆಂಡತಿ—ಅಯ್ಯಾ! ಕಾಪಾಡಿರಿ. ಕಾಪಾಡಿರಿ.

ಚಂದನ—ಅಯ್ಯಾ! ಸ್ವಲ್ಪಹೊತ್ತು ನಿಲ್ಲಿರಿ. ಎಲೆ ಹೃದಯವಲ್ಲಭೆಯೆ! ಇನ್ನೇಕೆ ರೋದಿಸುವೆ? ಯಾರು ದುಃಖಿತರಾದ ಸ್ತ್ರೀಜನರಲ್ಲಿ ಪ್ರತಿದಿನವೂ ಕನಿಕರವನ್ನು ತೋರಿಸುತ್ತಿದ್ದರೋ, ಆ ಪ್ರಭುಗಳಾದ ನಂದರು ದಿವಂಗತರಾದರಲ್ಲ!

೧ನೆಯ ಚಂಡಾ-ಎಲೈ ವೇಣುವೇತ್ರಕನೆ! ಚಂದನದಾಸನನ್ನು ಹಿಡಿದುಕೊ. ಪರಿಜನವು ತನ್ನಷ್ಟಕ್ಕೆ ತಾನೇ ತೆರಳುವುದು.

೨ನೆಯ ಚಂಡಾ—ಎಲೈ ವಜ್ರಲೋಮನೆ! ಇದೊ! ಹಿಡಿದುಕೊಳ್ಳುವೆನು.

ಚಂದನ—ಭದ್ರನೆ! ಕೊಂಚಹೊತ್ತು ತಾಳು. ಮಗುವನ್ನು ಸಮಾಧಾನಗೊಳಿಸುವೆನು. (ಮಗುವನ್ನು ಅಪ್ಪಿಕೊಂಡು ತಲೆಯಲ್ಲಿ ಮೂಸಿನೋಡಿ) ಮಗುವೆ! ಅವಶ್ಯವಾಗಿ ಆಗಬೇಕಾಗಿರುವ ವಿನಾಶವನ್ನು ಮಿತ್ರಕಾರ್ಯಕ್ಕಾಗಿ ಪಡೆಯುವೆನು.

ಪುತ್ರ—ತಂದೆಯೆ! ಇದನ್ನೂ ಹೇಳಬೇಕೆ? ಇದು ನಮ್ಮ ಕುಲಧರ್ಮವಷ್ಟೆ!

(ಎಂದು ಕಾಲಿಗೆರಗುವನು.)

ಚಂಡಾ—ಎಲೈ ವಜ್ರಲೋಮನೆ! ಇವನನ್ನು ಹಿಡಿದುಕೊ.

ಹೆಂಡತಿ— (ಎದೆಯನ್ನು ಬಡಿದುಕೊಳ್ಳುತ್ತ) ಆರ್ಯನೆ! ಕಾಪಾಡು. ಕಾಪಾಡು,

(ರಾಕ್ಷಸನು ತೆರೆಯನ್ನು ಹಾರಿಸಿಕೊಂಡು ಪ್ರವೇಶಿಸಿ)

ರಾಕ್ಷ—ಪೂಜ್ಯಳೆ! ಹೆದರಬೇಡ, ಹೆದರಬೇಡ. ಎಲೈ ಶೂಲಾಯತಿಕರಿರಾ! ಚಂದನದಾಸನನ್ನು ಕೊಲ್ಲಬೇಡಿರಿ.

ವೃ॥ ದೇವಕುಲಂ ಅಯ್ಯಂಬಡೆಯುಲೀಕ್ಷಿಸಿ ಶತ್ರುವೊಲಾವನಿರ್ದ
ಸಿ| ನ್ನಾವನಸದಾಪ್ತ ರಾಪದದೊ ಳುತ್ಸವದಂತೆ ವೊಲಿರ್ದ
ನೊಲ್ಮೆಯಿಂ॥ ಆವನೊಡಲ್ ಕೊಲಲ್ ನಿಮಗೆ ನಲ್ಮೆಯ
ನಿತ್ತುದೊ ನಿಂದ್ಯನಾದೊಡಂ| ಜೀವವಿಯೋಗ ಹೇತು
ಮೃತಿಮಾಲೆಯನಾ ಎನಗೀಗಳೊಡ್ಡಿರೈ ॥

ಚಂದನ—(ನೋಡಿ ಕಂಬನಿಗರೆಯುತಾ) ಅಮಾತ್ಯನೆ! ಇದೇನು? ನೀನು ಮಾಡಿದ ಕೆಲಸವು?

ರಾಕ್ಷ—ಇದು ನಿನ್ನ ಸಚ್ಚರಿತ್ರ ಲೇಶವನ್ನು ಅಣಕಿಸುವುದಲ್ಲವೆ?

ಚಂದನ—ಅಮಾತ್ಯನೆ! ನಾನು ಮಾಡಿದುದೆಲ್ಲವೂ ನಿಷ್ಫಲವಾಯಿತು. ಅಮಾತ್ಯನೀ ಪ್ರಯಾಸಪಟ್ಟುದೂ ನನಗೆ ಪ್ರಿಯವಾಗಲಿಲ್ಲ.

ರಾಕ್ಷ—ಮಿತ್ರ ಚಂದನದಾಸನೆ! ಸಾಕು. ಸಾಕು. ಇನ್ನು ನಿಂದಿಸಬೇಡ. ಜೀವಲೋಕಕ್ಕೆ ಸ್ವಾರ್ಥವೇ ಪ್ರಧಾನವಲ್ಲವೆ? ಅಯ್ಯಾ! ದುರಾತ್ಮನಾದ ಚಾಣಕ್ಯನಿಗೆ ಈ ಸಂಗತಿಯನ್ನು ತಿಳುಹಿಸು.

ಚಂಡಾ—ಏನೆಂದು?

ರಾಕ್ಷ—ವೃ|| ದುರುಳಗೇಳ್ಗೆಯನೀವ ದುಷ್ಕಲಿಯೊಳುಂ ಸ್ವ
ಪ್ರಾಣದಿಂ ದನ್ಯರಂ| ಪೊರೆಯುತ್ತುಂ ಶಿಬಿಕೀರ್ತಿ
ಯಂ ಕೆಡಿಸಿ ತಾನಾಂತಿರ್ಪ ಸತ್ಕೀರ್ತಿಯಿಂ|| ಕರೆ
ಗೊಂಬಂತಿರೆ ಬುದ್ಧರೊಳ್ಚರಿತವುಂ ಗೆಯ್ಯುತ್ತೆ
ಪೂಜಾರ್ಹನಾ| ಗಿರುವೀತಂ ನಿನಗಾರಿಗಾಗಿ ಪಗೆ
ಯಾದಂ ನಾನವಂ ರಾಕ್ಷಸಂ || ಎಂದು.

ಚಂಡಾ—ಎಲೈ ವೇಣುವೇತ್ರಕನೆ! "ಅಮಾತ್ಯರಾಕ್ಷಸನು ಸಿಕ್ಕಿದನು" ಎಂದು ನಾನು ಆರ್ಯ ಚಾಣಕ್ಯನಿಗೆ ತಿಳುಹುವೆನು. ನೀನು ಚಂದನದಾಸನನ್ನು ಹಿಡಿದುಕೊಂಡು ಇಲ್ಲಿಯೇ ಸ್ಮಶಾನದಲ್ಲಿರುವ ಗಿಡದ ನೆಳಲಲ್ಲಿ ಸ್ವಲ್ಪಹೊತ್ತು ನಿಲ್ಲು.

೨ನೆಯ ಚಂಡಾ—ಎಲೈ ವಜ್ರಲೋಮನೆ! ಹಾಗೆಯೇ ಆಗಲಿ. (ಎಂದು ಪತ್ನೀಪುತ್ರರೊಡನೆ ಚಂದನದಾಸನನ್ನು ಕರೆದುಕೊಂಡು ಹೊರಟುಹೋದನು.)

೧ನೆಯ ಚಂಡಾ—ಅಮಾತ್ಯನು ಬರಬೇಕು. (ಎಂದು ಅಮಾತ್ಯನೊಡನೆ ಹೊರಟು) ಇದು ಚಾಣಕ್ಯನ ಮನೆಯು. (ಎಂದು ನಡೆದು) ಅದಾರು ಬಾಗಿಲಲ್ಲಿ ? ನಂದಕುಲಾಚಲಕ್ಕೆ ವಜ್ರಾಯುಧನು, ಮೌರ್ಯವಂಶಪ್ರತಿಷ್ಠಾಪಕನೂ ಆದ ಆರ್ಯ ಚಾಣಕ್ಯನಿಗೆ ಬಿನ್ನವಿಸಿರಿ.

ರಾಕ್ಷ—(ಸ್ವಗತಂ) ಇದನ್ನೂ ಕೇಳಬೇಕಾಯಿತಲ್ಲಾ !

ಚಂಡಾ—“ ಆರ್ಯನ ತಂತ್ರದಿಂದ ಕುಂಠಿತವಾದ ಬುದ್ಧಿಪ್ರಭಾವವುಳ್ಳ ಈ ರಾಕ್ಷಸನು ಸಿಕ್ಕಿದನು ” ಎಂದು.

(ಅನಂತರದಲ್ಲಿ ಚಾಣಕ್ಯನು ಶರೀರವನ್ನು ತೆರೆಯಿಂದ ಮರೆಮಾಡಿಕೊಂಡು ಮುಖವ ಮಾತ್ರ ಕಾಣುವಂತೆ ಪ್ರವೇಶಿಸುವನು.)

ಚಾಣ—ಭದ್ರನೆ ! ಹೇಳು. ಹೇಳು.

ವೃ|| ಅವನೊ ವಾಯುವಂ ಬಿಗಿದು ಪಾಶದೆ ನಿಲ್ಲಿಸಿದಂ ಮಹಾತ್ಮ ನಿ| ನ್ನಾವ ನುದಗ್ರವಾಗಿ ಸುಡುವಾ ಕಿಡಿಯಂ ಸೆರಗೊಡ್ಡಿ ಕಟ್ಟಿದಂ|| ಅವನೊ ದಾನವಾಸನೆಯ ಕೇಸರಿಯಂ ಸೆರೆಗೆಯ್ದ ನಳ್ಕರಿಂ | ದಾವನನೇಕ ಮೀನ ಮಕರಾಕರ ಮಂ ಭುಜದಿಂದೆ ದಾಂಟಿದಂ ||

ಚಂಡಾ—ತಂತ್ರನಿಪುಣನಾದ ಆರ್ಯನೇ.

ಚಾಣ—ಅಯ್ಯಾ ! ಹಾಗಲ್ಲ. ನಂದಕುಲದ್ವೇಷಿಯಾದ ದೈವವೆಂದು ಹೇಳು.

ರಾಕ್ಷ—(ನೋಡಿ ಸ್ವಗತಂ) ಇದೊ ! ದುರಾತ್ಮನಾದ ಚಾಣಕ್ಯನು ಅಥವಾ ಮಹಾತ್ಮನಾದ ಕೌಟಿಲ್ಯನು.

ಕಂ|| ಸಾಗರವೆನೆ ಪದ್ಮಂಗ |
ಳ್ಗಾಗರಮು ಸಂಕುಲಕೆ ಗಣಿಯೆನಿಪ್ಪಿವನೊಳ್ ನೀ||
ರಾಗದೆ ಪಗೆಯಂ ಬಗೆಯುತೆ |
ಸೌಗುಣ್ಯಕೆ ಸಂತಸಿಸ ದಸೂಯೆ ಗೊಳುವೆನ್ಯೆ ||

ಚಾಣ—(ನೋಡಿ ಸಂತೋಷದಿಂದ ಆತ್ಮಗತಂ) ಇದೊ! ಅಮಾತ್ಯರಾಕ್ಷಸನು. ಯಾವ ಮಹಾತ್ಮನಾದರೆ

ಕಂ|| ಅರಿದೆನೆ ನೀಳ್ದಿಚ್ಚರಕಾ |
ಕರಮಹ ಗುರುಕಲ್ಪನಾತಿ ದುಃಖಗಳಿಂದಂ ;
ಪಿರಿದಾಯಾಸನು ನಾವಂ |
ವಿರಚಿಸಿದನೊ ವೃಷಲಸೈನ್ಯಕಂ ಮನ್ಮನಕಂ ||

(ಕೈಯಿಂದ ಪರದೆಯನ್ನೋರೆಮಾಡಿಕೊಂಡು ಪ್ರವೇಶಿಸಿ) ಅಯ್ಯಾ ಅಮಾತ್ಯರಾಕ್ಷಸನೆ! ವಿಷ್ಣುಗುಪ್ತನಾದ ನಾನು ಸಮಸ್ಕರಿಸುವೆನು.

ರಾಕ್ಷ—(ಆತ್ಮಗತಂ) ಅಮಾತ್ಯನೆಂಬೀ ವಿಶೇಷಣಪದವು ಈಗ ನಾಚಿಕೆಗೊಳಿಸುತ್ತಿರುವುದು. (ಪ್ರಕಾಶಂ) ಅಯ್ಯಾ ವಿಷ್ಣುಗುಪ್ತನೆ! ಚಂಡಾಲಸ್ಪರ್ಶದಿಂದ ದೂಷಿತನಾದ ನನ್ನನ್ನು ಮುಟ್ಟಬೇಡ.

ಚಾಣ—ಅಯ್ಯಾ! ಅಮಾತ್ಯರಾಕ್ಷಸನೆ! ಇವರು ಚಂಡಾಲರಲ್ಲ, ಸಿದ್ಧಾರ್ಥಕನೆಂಬೀ ರಾಜಪುರುಷನನ್ನು ನೀನು ಮೊದಲೇ ನೋಡಿರುವೆಯಷ್ಟೆ! ಈ ಎರಡನೆಯವನೂ ಸಹ ಸಮಿದ್ಧಾರ್ಥಕನೆಂಬ ರಾಜಪುರುಷನೇ. ಕಪಟವನ್ನು ಅರಿಯದ ಶಕಟದಾಸನನ್ನು ಮೋಸಗೊಳಿಸಿ ನಾನೇ ತಿಳಿಯದಂತೆ ಆ ಕಾಗದವನ್ನೂ ಅವನಿಂದ ಬರೆಯಿಸಿದೆನು.

ರಾಕ್ಷ—(ಸಂತೋಷದಿಂದ) ದೈವಯೋಗದಿಂದ ನನಗೆ ಶಕಟದಾಸನಲ್ಲಿ ಸಂಶಯ ನಿವೃತ್ತಿಯಾಯಿತು.

ಚಾಣ—ಬಹಳಮಾತೇಕೆ? ಇದೊ ಸಂಕ್ಷೇಪವಾಗಿ ಹೇಳುವೆನು ಕೇಳು—

ವೃ|| ಮೊದಲಾ ಭದ್ರಭಟಾದಿಗಳ್ ಬಳಿಕವಿಾ ಸಿದ್ಧಾರ್ಥ ನಾ ಲೇಖಮುಂ| ದದಲಂಕಾರಗಳುಂ ಭದಂತನವನುಂ ನಿನ್ನಾಪ್ತ ನತ್ಯಂತ ದುಃ || ಖದೊಳುದ್ಯಾನಕೆ ಬಂದ ಪೂರುಷ

ನವಂ ತಚ್ಛ್ರೇಷ್ಠಿಯು ಕ್ಲೇಶ ಮೆಂ || ಬಿದುವೆಲ್ಲೆನ್ನಯ
ತಂತ್ರವ್ಯೈ ಕಲಿಯೆ! ನಿನ್ನಂ ಸೇರಿಸಲ್ ಮಹಾರ್ಯನೊಳ್ ||

ಆದುದರಿಂದ ವೃಷಲನು ನಿನ್ನನ್ನು ಕಾಣುವುದಕ್ಕಾಗಿ ಬರುತ್ತಿರುವನು. ನೋಡು.

ರಾಕ್ಷ—(ಆತ್ಮಗತಂ) ಏನುಗತಿ? (ಪ್ರಕಾಶಂ) ಇದೊ! ನೋಡುವೆನು.

(ಅನಂತರದಲ್ಲಿ ರಾಜನು ವೈಭವದಿಂದ ಪರಿವಾರದೊಡನೆ ಪ್ರವೇಶಿಸುವನು.)

ರಾಜಂ—ಆರ್ಯನು ಯುದ್ಧವನ್ನೇ ಮಾಡದೆ ದುರ್ಜಯವಾದ ಶತ್ರುಸೈನ್ಯವನ್ನು ಗೆದ್ದುದರಿಂದ ನಾನು ಲಜ್ಜಿತನಾಗಿರುವೆನು. ಏಕೆಂದರೆ—

ಕಂ|| ಫಲವುಂ ಪೊಂದಿದೊಡಂ ವಿಧಿ |
ವಿಲಸಿತದೆ ವಿಪಕ್ಷಭಾವವುಂ ಪಡೆದ ಶರಾ ||
ವಲಿ ನಾಣಿಂ ತಲೆವಾಗಿಸಿ |
ಮಲಗಿರಲದು ತೂಣಿಯೊಳ್ ಸುಖಾಸ್ಪದಮಲ್ಲಂ ||

ಅಥವಾ-ತಿರುವೇರಿಸದೆಯೆ ಬಿಲ್ಗಾಂ |
ತಿರೆಯೊಳ ಗರಿದೆನಿಪುದೆಲ್ಲಮುಂ ಗೆಲಲಕ್ಕುಂ ||
ಗುರುಗಳ್ ಕಾರ್ಯ್ಯದೊಳೆಚ್ಚರ |
ದಿರುವುದರಿಂ ಜಾಗರೂಕ ನಾನಲ್ಲದೊಡಂ ||

(ಚಾಣಕ್ಯನ ಬಳಿಗೆ ಬಂದು) ಆರ್ಯನೆ! ಚಂದ್ರಗುಪ್ತನು ನಮಸ್ಕರಿಸುವನು.

ಚಾಣ—ವೃಷಲನೆ! ನಿನ್ನ ಮನೋರಥಗಳೆಲ್ಲವೂ ಈಡೇರಿದುವು. ಆದುದರಿಂದ ಪೂಜ್ಯನಾದ ಅಮಾತ್ಯರಾಕ್ಷಸನನ್ನು ನಮಸ್ಕರಿಸು. ಈತನು ನಿನ್ನ ಹಿರಿಯರ ಕಾಲದಿಂದ ಬಂದ ಮುಖ್ಯಮಂತ್ರಿಯು.

ರಾಕ್ಷ—(ಸ್ವಗತಂ) ಇವನು ಸಂಬಂಧವನ್ನು ತಂದೊಡ್ಡಿದನು.

ರಾಜಂ—(ರಾಕ್ಷಸನ ಬಳಿಗೆ ಹೋಗಿ) ಆರ್ಯನೆ! ಚಂದ್ರಗುಪ್ತನು ವಂದಿಸುವನು.

ರಾಕ್ಷ—(ನೋಡಿ ಆತ್ಮಗತಂ) ಇದೊ! ಚಂದ್ರಗುಪ್ತನು.

ಕಂ|| ಜನಮೂಹಿಸಿದಂತೆಯೆ ಬಾ |
ಲನಿವಂ ಕ್ರಮದಿಂ ಮಹೋದಯಮನೊಂದುತ್ತಂ ||
ವನಕರಿ ಯೂಥೈಶ್ವರ್ಯಮ |
ನನುಭವಿಸುವ ತೆರದೆ ರಾಜ್ಯಪದಮಂ ಪಡೆದಂ ||

(ಪ್ರಕಾಶಂ) ರಾಜನೆ! ಜಯಶಾಲಿಯಾಗು.

ರಾಜಂ—ಆರ್ಯನೆ!

ಕಂ|| ಗುರುವೆನಿಸಿದಾರ್ಯನಾರ್ಯನು |
ಮುರುತರ ಷಾಡ್ಗುಣ್ಯಚಿಂತೆಯಿಂ ವಹಿಸುತಮಿ ||
ಚ್ಚರದಿಂ ದಿರಲೀಗ ವಸುಂ |
ಧರೆಯೊಳ್ ನಾಂ ಜಯಿಸದಿರ್ಪುದಾವುದು ಮಿಲ್ಲಂ ||

ರಾಕ್ಷ—(ಆತ್ಮಗತಂ) ಕೌಟಿಲ್ಯಶಿಷ್ಯನ. ನನ್ನಲ್ಲಿ ಭೃತ್ಯಭಾವವನ್ನು ಸೂಚಿಸುತ್ತಿರುವನು. ಅಥವಾ ಈ ವಿನಯವು ಚಂದ್ರಗುಪ್ತನಿಗೆ ಸಹಜವಾಗಿಯೇ ಇರಬಹುದು. ಮತ್ಸರವು ನನಗೆ ವ್ಯತ್ಯಸ್ತವಾಗಿ ತೋರಿಸುತ್ತಿರುವುದು. ಏನಾದರೂ ಚಾಣಕ್ಯನೇ ಕೀರ್ತಿಮಂತನು.

ಕಂ|| ಜಡನಾದೊಡ ಮುತ್ತಮನಂ |
ನಡೆಯಿಸೆ ಪಡೆವಂ ಯಶಸ್ವಿ ಪದಮಂ ನಯಮು ||
ಳ್ಳೊಡ ಮಧಮನ ವಹಿಸಿದವಂ |
ತಡಿಯೊಳಗಣ ಗಿಡದ ತೆರದೆ ಜಗುಳ್ದುರುಳುವನೈ ||

ಚಾಣ—ಅಮಾತ್ಯರಾಕ್ಷಸನೆ! ನಿನಗೆ ಚಂದನದಾಸನು ಬದುಕಬೇಕೆಂಬ ಆಸೆಯುಂಟೆ?

ರಾಕ್ಷ—ಸಂಶಯವೇನು?

ಚಾಣ—ಅಮಾತ್ಯನೆ! ನೀನು ಶಸ್ತ್ರವನ್ನು ಹಿಡಿಯದೆ ವೃಷಲನನ್ನು ಅನುಗ್ರಹಿಸುವುದಿಲ್ಲವೆಂಬದರಿಂದ ಸಂಶಯವು. ಆದಕಾರಣ ದಿಟವಾಗಿ ಚಂದನದಾಸನು ಬದುಕಬೇಕಾಗಿದ್ದರೆ ನೀನೀಶಸ್ತ್ರವನ್ನು ಪರಿಗ್ರಹಿಸು.

ರಾಕ್ಷ—ಅಯ್ಯಾ ವಿಷ್ಣುಗುಪ್ತನೆ! ಸಂಶಯವೇಕೆ? ಆದರೆ, ಈ ಖಡ್ಗವನ್ನು ಗ್ರಹಿಸುವುದಕ್ಕೆ ನಾವು ಯೋಗ್ಯರಲ್ಲ. ಅದರಲ್ಲಿಯೂ ನೀನು ಹಿಡಿಯುತ್ತಿದ್ದ ಶಸ್ತ್ರವನ್ನು! ಹೇಳುವುದೇನು?

ಚಾಣ—ರಾಕ್ಷಸನೆ! ನಾನು ಯೋಗ್ಯನು, ನೀನು ಅಲ್ಲ. ಎಂದರೇನು? ನೋಡು—

**ವೃ॥ ಕಡುಗಲಿಯೊಡ್ಡ ನಡ್ಡವಿಸಿ ಬಿಂಕವ ನಿಕ್ಕಿದ ನಿನ್ನ ಮೈಮೆ**
**ಯಿಂ। ದೆಡೆ ವಿಡದಾಂತ ಪಲ್ಲಣ ದಮರ್ಚಿದ ಬಾಯ್ಕುಡಿ**
**ನಾಣದಿಂ ದೊಡಲ್॥ ಕಿಡೆ ಬಡವಾದ ವಾಜಿಗಳ ನೇರುತೆ**
**ಭೋಜನ ಪಾನ ಸೌಖ್ಯಮುಂ। ಬಿಡುತೆ ಬಳಲ್ದ ವೀರ**
**ಭಟರಂ ಗಜಸೇನೆಯುಮಂ ವಿಲೋಕಿಸೈ॥**

ಅಥವಾ ಬಹಳ ಮಾತೇಕೆ? ನೀನು ಶಸ್ತ್ರವನ್ನು ಹಿಡಿದಹೊರತು ಚಂದನದಾಸನು ಬದುಕುವುದಿಲ್ಲ.

ರಾಕ್ಷ—(ಆತ್ಮಗತಂ)

**ವೃ॥ ನಂದರ ಮೈತ್ರಿಯಿಂ ವಿವಶ ಮೆನ್ನಮನಂ ತಪರಾತಿಗಳ್ಗೆ**
**ನಾ। ನಿಂದಿದೊ ಭೃತ್ಯನಾದಪೆ ನದಾವುದ ನೆನ್ನ ಕರಾಂಬು**
**ಜೇಕದಿಂ॥ ಕುಂದಿಸದೋವಿದೆಂ ಕಡಿವೆ ನಾಮರವಂ ಕೆಳೆ**
**ಗಾಗಿ ಶಸ್ತ್ರಮಂ। ಪೊಂದುವೆ ನಿಂತು ಕಾರ್ಯಗತಿಗಾ**
**ವಿಧಿಯುಂ ಪರತಂತ್ರಮಾತ್ತೆ ತಾಂ॥**

(ಪ್ರಕಾಶಂ) ವಿಷ್ಣುಗುಪ್ತನೆ! ಶಸ್ತ್ರವನ್ನು ಕೊಡು. ಸರ್ವಕಾರ್ಯ ಪ್ರವೃತ್ತಿಕಾರಣವಾದ ಮಿತ್ರಸ್ನೇಹಕ್ಕೆ ನಮಸ್ಕಾರವು. ಇನ್ನೇನು ಮಾರ್ಗವಿದೆ? ಇದೊ ಸಿದ್ಧನಾದೆನು.

ಚಾಣ—(ಸಂತೋಷದಿಂದ ಶಸ್ತ್ರವನ್ನೊಪ್ಪಿಸಿ) ವೃಷಲನೆ! ಶಸ್ತ್ರವನ್ನು ಸ್ವೀಕರಿಸಿದ ಅಮಾತ್ಯರಾಕ್ಷಸನಿಂದೀಗ ಅನುಗೃಹೀತನಾದೆ. ದೈವಯೋಗದಿಂದ ನೀನು ವೃದ್ಧಿಯಾಗುವೆ.

ರಾಜಂ—ಚಂದ್ರಗುಪ್ತನನುಭವಿಸುವುದೆಲ್ಲವೂ ಆರ್ಯನನುಗ್ರಹವೇ.

(ಪುರುಷಂ ಪ್ರವೇಶಿಸಿ)

ಪುರು—ಭದ್ರಭಟ ಭಾಗುರಾಯಣಾದಿಗಳು ಮಲಯಕೇತುವಿನ ಕೈಕಾಲು ಗಳನ್ನು ಬಿಗಿದು ಬಾಗಿಲುಮುಂದೆ ನಿಲ್ಲಿಸಿರುವರು. ಇನ್ನು ಸ್ವಾಮಿ ಚಿತ್ತವಿದ್ದಂತೆ ಮಾಡಬಹುದು.

ಚಾಣ—ಭದ್ರನೆ! ಶ್ರುತವಾಯಿತು. ಅಮಾತ್ಯರಾಕ್ಷಸನಿಗೆ ತಿಳುಹಿಸು. ಈಗ ರಾಜಕಾರ್ಯವನ್ನು ನಡೆಯಿಸುವವನು ಆತನು.

ರಾಕ್ಷ—(ಆತ್ಮಗತಂ) ಕೌಟಿಲ್ಯನು ನನ್ನನ್ನು ಭೃತ್ಯನನ್ನಾಗಿ ಮಾಡಿ ಈಗ ಬೇಡಿ ಕೊಳ್ಳುವಂತೆ ಮಾಡುತ್ತಿರುವನು. ಏನುಗತಿ? (ಪ್ರಕಾಶಂ) ಚಂದ್ರಗುಪ್ತ ರಾಜನೆ! ನಾವು ಕೆಲವುಕಾಲ ಮಲಯಕೇತುವಿನಲ್ಲಿ ನೆಲಸಿದ್ದೆವೆಂದು ನಿನಗೆ ತಿಳಿದೇ ಇರುವುದು. ಆದುದರಿಂದ ಆತನ ಪ್ರಾಣಗಳನ್ನು ರಕ್ಷಿಸು.

ರಾಜ—(ಚಾಣಕ್ಯನ ಮುಖವನ್ನು ನೋಡುವನು.)

ಚಾಣ—ವೃಷಲನೆ! ಅಮಾತ್ಯರಾಕ್ಷಸನ ಪ್ರಥಮ ಪ್ರಣಯವನ್ನು ಗೌರ ವಿಸಬೇಕು. (ಪುರುಷನನ್ನು ಕುರಿತು) ಭದ್ರನೆ! « ಅಮಾತ್ಯರಾಕ್ಷಸನ ಪ್ರಾರ್ಥನೆಯಂತೆ ಚಂದ್ರಗುಪ್ತಮಹಾರಾಜನು ಮಲಯಕೇತುವಿಗೆ

ಪಿತ್ರಾರ್ಜಿತವಾದ ರಾಜ್ಯವನ್ನೇ ಕೊಟ್ಟಿರುವನು. ಆದುದರಿಂದ ನೀವೆಲ್ಲರೂ ಹೋಗಿ ಆತನಿಗೆ ಪಟ್ಟವನ್ನು ಕಟ್ಟಿ ಹಿಂದಿರುಗಿ ಬರತಕ್ಕುದು '' ಎಂದು ಭದ್ರಭಟಾದಿಗಳಿಗೆ ನಮ್ಮ ಮಾತನ್ನು ತಿಳುಹಿಸು.

ಪುರು—ಆರ್ಯನಪ್ಪಣೆಯಂತಾಗಲಿ. (ಎಂದು ಹೊರಡುವನು.)

ಚಾಣ—ಅಯ್ಯಾ ! ನಿಲ್ಲು, ನಿಲ್ಲು. ಶಸ್ತ್ರವನ್ನು ವಹಿಸಿದ ಅಮಾತ್ಯರಾಕ್ಷಸನಲ್ಲಿ ಪ್ರೀತಿಯಿಂದ ಚಂದ್ರಗುಪ್ತ ಮಹಾರಾಜನು " ಈ ಚಂದನದಾಸನಿಗೆ 'ಸರ್ವನಗರಶ್ರೇಷ್ಠಿ' ಎಂಬ ಬಿರುದನ್ನು ಕೊಡಿಸತಕ್ಕುದು '' ಎಂದಾಜ್ಞಾಪಿಸಿರುವನು. ಈ ಸಂಗತಿಯನ್ನೂ ವಿಜಯಪಾಲನಿಗೂ, ದುರ್ಗಪಾಲನಿಗೂ ಹೇಳು.

ಪುರು—ಅಮಾತ್ಯನಾಜ್ಞೆಯಂತಾಗಲಿ. (ಎಂದು ತೆರಳಿದನು.)

ಚಾಣ—ಚಂದ್ರಗುಪ್ತರಾಜನೆ ! ನಿನಗಿನ್ನೇನುಪಕಾರವನ್ನು ಮಾಡಲಿ ?

ರಾಜಂ—ಆರ್ಯನೆ ! ಇದಕ್ಕಿಂತಲೂ ಇನ್ನೇನುಪಕಾರವಿರುವುದು ?

ಕಂ|| ಖಳರಾದ ನಂದರೆಲ್ಲರ |
ನಳಿಸಿದೆ ಸಾಮ್ರಾಜ್ಯ ಪದವಿಯಂ ಕೊಡಿಸಿದೆ ನೀಂ ||
ಕೆಳೆಯಂ ರಾಕ್ಷಸನೊಳೆಮಗೆ |
ಬೆಳೆಯಿಸಿದೈ ಮಾಡತಕ್ಕುದಿನ್ನೇನಿರ್ಕುಂ ? ||

ಚಾಣ—ವಿಜಯೆ ! ಅಮಾತ್ಯರಾಕ್ಷಸನು ಮಂತ್ರಿಪದವನ್ನು ವಹಿಸಿದುದರಿಂದ ಸುಪ್ರೀತನಾದ ಚಂದ್ರಗುಪ್ತ ಮಹಾರಾಜನು " ಆನೆಕುದುರೆಗಳನ್ನು ಹೊರತು ಎಲ್ಲರನ್ನೂ ಸೆರೆಯಿಂದ ಬಿಡಲಿ '' ಎಂದಾಜ್ಞಾಪಿಸಿರುವುದನ್ನು ವಿಜಯಪಾಲನಿಗೂ, ದುರ್ಗಪಾಲನಿಗೂ ತಿಳುಹಿಸು. ಅಥವಾ ಅಮಾತ್ಯರಾಕ್ಷಸನೇ ಮಂತ್ರಿಯಾಗಿರುವಾಗ ಆನೆಕುದುರೆಗಳಿಂದತಾನೇ ಪ್ರಯೋಜನವೇನು ? ಆದುದರಿಂದೀಗಳೇ—

ಕಂ|| ಕರಿತುರಗ ವಾಹನಂಗಳ |
ವೆರಸೆಲ್ಲರ ಬಂಧನಂಗಳಂ ಕಳೆವುದು ಸಂ ||
ಗರಮಂ ನೆರವೇರಿಸಿ ದಾಂ |
ಭರದೆನ್ನಯ ಶಿಖೆಯ ನೊಂದನೇ ಬಂಧಿಪೆನೈ ||
(ಎಂದು ಶಿಖೆಯನ್ನು ಗಂಟಿಡುವನು.)

ಪುರು— ಆರ್ಯನಪ್ಪಣೆಯಂತೆ. (ಎಂದು ತೆರಳಿದನು.)

ಚಾಣ—ಅಮಾತ್ಯರಾಕ್ಷಸನೆ! ನಿನಗಿನ್ನೇನುಪಕಾರವನ್ನು ಮಾಡಲಿ?

ರಾಕ್ಷ—ಇದಕ್ಕಿಂತ ಪ್ರಿಯವಾದುದೂ ಮತ್ತೇನುಂಟು? ಆದರೂ ಇದು ಭರತವಾಕ್ಯವಾಗಲಿ—

ವೃ|| ಪೊರೆಯಲ್ ತಕ್ಕುದೆನಿಪ್ಪ ಪಂದಿಯೊಡಲಂ ಪೊತ್ತಾವ ಲಕ್ಷ್ಮೀ ಮನೋ| ಹರನಾ ಪಲ್ತುದಿಯೋರಿದತ್ತೊ ಲಯದೊಳ್ ಮ್ಲೇಚ್ಛವರ್ಗಳುಂಕೀಗಳುಂ || ಧರೆಯಾವಾತ್ಮನ ತೋಳ ನೊಂದಿಹುದೊ ಆ ಶ್ರೀಚಂದ್ರಗುಪ್ತಂ ಮಹೀ | ವರನೆಂದುಂ ಪೊರೆಗು ರ್ವಿಯಂ ಸಕಲ ಸಂಪದ್ಬಂಧು ಭೃತ್ಯಾಳಿಯಿಂ || (ಎಂದೆಲ್ಲರೂ ತೆರಳಿದರು.)

ಸಪ್ತಮಾಂಕಂ ಸಮಾಪ್ತಂ —

ಶ್ಲೋ|| ಸತ್ಯಾಸಕ್ತಮನಾಃ ಕುಚೇಲಹಿತಕೃದ್ಗೋವರ್ಧನೋದ್ಧಾರಕೋ| ನಿತ್ಯಾಕ್ರೂರಪರಿಗ್ರಹಃ ಪೃಥುಕಲಾಭಾನೋಪದಯುಕ್ತಾಂತರಃ || ನಿತ್ಯಶ್ರೀ ರನಿರುದ್ಧವೃದ್ಧಿಸುಖಿತೋ ಧರ್ಮಾರ್ಣವನ್ಯೈಕಾದರಃ | ಜೀಯಾತ್ ಕೃಷ್ಣಮಹೀಪತಿ ರ್ಯದುಕುಲಾಲಂಕಾರ ಭೂತ ಶ್ಚಿರಂ ||

— ಮುದ್ರಾರಾಕ್ಷಸ ನಾಟಕಂ ಸಂಪೂರ್ಣಂ —

# ಕ್ಲಿಷ್ಟಪದ್ಯಗಳ ಅರ್ಥತಾತ್ಪರ್ಯಾದಿಗಳು.



ಪುಟ ಪಙ್ತಿ

೧ ೮ ಗೌರೀಶಿವರ ಸಂವಾದರೂಪವಾದ ಈ ನಾಂದೀಪದ್ಯದಲ್ಲಿ-ಶಿವನು ತಕ್ಕಮಾತುಗಳಿಂದ ಗೌರಿಯನ್ನು ವಂಚಿಸಿ, ಗಂಗೆಯನ್ನು ಮರೆಮಾಚಿದನೆಂದು ತಾತ್ಪರ್ಯವು. ಮತ್ತು ಚಾಣಕ್ಯನು ಈ ನಾಟಕದಲ್ಲಿ ಗೌರೀರೂಪವಾದ ಧರ್ಮನೀತಿಯನ್ನು ಗೆದ್ದು ಗಂಗಾರೂಪವಾದ ಕುಟಿಲನೀತಿಯನ್ನು ಪ್ರಯೋಗಿಸುವನೆಂದು ಸೂಚ್ಯಾರ್ಥವು.

೧೦ ನಟರಾಜನು ಹಸ್ತ, ಪಾದ, ನೇತ್ರ, ಇವುಗಳಿಂದ ಸ್ವೇಚ್ಛೆಯಾಗಿ ಅಭಿನಯಿಸಿದಲ್ಲಿ ಅವುಗಳಿಗೆ ಆಧಾರಗಳಾದ ದಿಕ್ಕುಗಳು, ಭೂಮಿ, ದೃಶ್ಯವಸ್ತುಗಳು ನಷ್ಟವಾಗುವುವೆಂದೆಣಿಸಿ, ದುಃಖದಿಂದ ನರ್ತಿಸಿದನೆಂದು ತಾತ್ಪರ್ಯವು. ಮತ್ತು ಚಾಣಕ್ಯನು ಸ್ವೇಚ್ಛೆಯಾಗಿ ವರ್ತಿಸಿದಲ್ಲಿ ಮೌರ್ಯರಾಜ್ಯನಿರ್ವಾಹಕ್ಕೆ ಆಧಾರಭೂತನಾದ ರಾಕ್ಷಸನಿಗೆ ಮಲಯಕೇತುವಿನಿಂದ ಅಪಾಯವು ಸಂಭವಿಸುವುದೆಂದು ಹೆದರಿ ಜಾಗರೂಕತೆಯಿಂದ ನೀತಿಯನ್ನು ಪ್ರಯೋಗಿಸುವನೆಂದು ಸೂಚ್ಯಾರ್ಥವು.

೨ ೧೧ ಈ ಪದ್ಯಕ್ಕೆ ಮೂರರ್ಥಗಳುಂಟು:—(೧) ಸೂತ್ರಧಾರನು ನಟಿಯನ್ನು ಕುರಿತು-ಸೌಶೀಲ್ಯ, ಗೃಹಕೃತ್ಯಸಾಮರ್ಥ್ಯ ಮೊದಲಾದ ಗುಣಗಳುಳ್ಳವಳೇ! ಉಪಾಯಗಾತಿಯೇ! ಗೃಹಸ್ಥಾಶ್ರಮಸ್ಥಿತಿಗೆ ಕಾರಣಗಳಾದ ಧರ್ಮಾರ್ಥಕಾಮಗಳಿಗೆ ಆಧಾರಳೇ! ಗೃಹಕೃತ್ಯಗಳಿಗೆ ಆಚಾರ್ಯಳೇ! ಬೇಗಬಾ, ಎಂದು,

ಪುಟ ಪಙ್ಕ್ತಿ

೨ ೧೧ (೨) ವಿಜಿಗೀಷುವಾದ ಚಂದ್ರಗುಪ್ತನು ವಿಜಯಯಾತ್ರೆ
ಗನುಕೂಲವಾದ ಶರದೃತುವನ್ನು ಕುರಿತು—ಅಂಭಃಪ್ರಸಾದಾದಿ
ಗುಣಗಳುಳ್ಳ, ಸಾಮಾದ್ಯುಪಾಯಗಳಿಗೆ ನೆಲೆಯಾದ, ಜಯಕ್ಕೆ
ಅವಕಾಶಕೊಡುವುದರಿಂದ ಲೋಕಸ್ಥಿತಿಗೆ ಹೇತುವಾದ ತ್ರಿವರ್ಗ
ವನ್ನು ಸಾಧಿಸುವ, ಚೈತ್ರಯಾತ್ರಾದಿ ಕಾರ್ಯಗಳನ್ನು ಉಪದೇಶಿ
ಸುವ ಶರದೃತುವೇ! ಬೇಗಬಾ. ಎಂದು,

(೩) ಚಾಣಕ್ಯನು ನೀತಿಯನ್ನು ಕುರಿತು--ಸಂಧಿವಿಗ್ರಹಾದಿ
ಗುಣಗಳಿಂದ ಸಾಮಾದ್ಯುಪಾಯಗಳನ್ನು ತಿಳುಹಿ ರಾಜ್ಯಸ್ಥಿತಿಗೆ
ಹೇತುವಾದ ಕ್ಷಯ, ಸ್ಥಾನ, ವೃದ್ಧಿಗಳೆಂಬ ತ್ರಿವರ್ಗವನ್ನು
ಸಾಧಿಸುವ ಕುಲವಿದ್ಯೆಯಾದ ನೀತಿಯೇ! ಬೇಗಬಾ. ಎಂದೂ
ಪ್ರಾರ್ಥಿಸುವರು.

೬ ೪ ಚಾಣ—ನನ್ನ ಕೋಪವೆಂಬ ಅಗ್ನಿಯು, ಶತ್ರುಸ್ತ್ರೀಯರೆಂಬ
ದಿಕ್ಕುಗಳ, ಮುಖಗಳೆಂಬ ಚಂದ್ರರನ್ನು ದುಃಖವೆಂಬ ಹೊಗೆ
ಯಿಂದ ಕರಿದೆನಿಸಿ, ಮಂತ್ರಿಗಳೆಂಬ ಗಿಡಗಳಿಗೆ, ನೀತಿಯೆಂಬ
ಗಾಳಿಯಿಂದ ತೂರಲ್ಪಟ್ಟ, ಅಜ್ಞಾನವೆಂಬ ಪೊಂಕುಬೂದಿಯ
ನ್ನೆರಚಿ, ಪಟ್ಟಣಿಗರೆಂಬ ಹಕ್ಕಿಗಳನ್ನು ಓಡಿಸಿ, ನಂದವಂಶವೆಂಬ
ಬಿದಿರುಪೊದೆಯನ್ನು ನಿರ್ಮೂಲವಾಗಿ ಸುಟ್ಟು ದಾಹ್ಯವಿಲ್ಲದೆ
ತಾನಾಗಿಯೇ ಶಾಂತವಾಗುವುದು.

೯೬ ೧೨ ಹಾವಾಡಿಗ—ಅನುರಕ್ತಳಾದ ರಾಜ್ಯಲಕ್ಷ್ಮಿಯು ಚಂದ್ರ
ಗುಪ್ತನ ತೋಳಲ್ಲಿ ಎಡದೋಳನ್ನಿಟ್ಟು, ಅಷ್ಟರಲ್ಲಿಯೇ ಅಮಾತ್ಯ
ರಾಕ್ಷಸನಿಗೆ ಹೆದರಿ ಬಲಾತ್ಕಾರದಿಂದ ಹೆಗಲಲ್ಲಿಡಲ್ಪಟ್ಟ ಬಲ
ದೋಳು ಜಾರಿ ತೊಡೆಯಲ್ಲಿ ಬೀಳುವಂತೆ ಮುಖವನ್ನು ಹಿಂದಿರು

ಪುಟ ಪಙ್ಕ್ತಿ

ಗಿಸಿದವಳಾಗಿ ಗಾಢಾಲಿಂಗನದಿಂದ ದಕ್ಷಿಣಸ್ತನವು ಬಳಲುವಂತೆ ಇಂದಿಗೂ ಅಪ್ಪಿಕೊಳ್ಳುವುದಿಲ್ಲ.

ತೊಡೆಯಲ್ಲಿ+ಅದ:+ಅವನ=ತೊಡೆಯಲ್ಲದಾವನ.

೪೦ ೪ ರಾಕ್ಷಸ— ಅರ್ಜುನನನ್ನು ಕೊಲ್ಲಲು ಕರ್ಣನೆಂತು ಶಕ್ತ್ಯಾಯುಧವನ್ನು ಸಲಹಿದನೊ, ಅಂತೆಯೇ ನಾನು ಚಂದ್ರಗುಪ್ತನನ್ನು ಮಡುಹಲು ವಿಷಕನ್ನೆಯನ್ನು ರಕ್ಷಿಸಿದೆನು. ಆದರೆ ಆ ಶಕ್ತಿಯು ಶ್ರೀಕೃಷ್ಣನ ಸಂಕಲ್ಪಕ್ಕನುಕೂಲವಾಗಿ ಘಟೋತ್ಕಚನನ್ನು ಸಂಹರಿಸಿದಂತೆ ವಿಷಕನ್ನೆಯು ಚಾಣಕ್ಯನ ಇಷ್ಟಾನುಸಾರವಾಗಿ ಅರ್ಧರಾಜ್ಯಭಾಗಿಯಾದ ಪರ್ವತರಾಜನನ್ನು ಕೊಂದಳು.

೫೩ ೩ ಕಂಚುಕಿ—ಆಸೆಯನ್ನು ಕುರಿತು— ತೃಷ್ಣೆಯೆ !
ಯಾವ ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣಗಳೆಂಬ ಇಂದ್ರಿಯಗಳು ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳಿಗೊಳಗಾದುದರಿಂದ ನೀನು ಜನಿಸಿದೆಯೋ, ಆ ಇಂದ್ರಿಯಗಳೇ ತಮ್ಮ ತಮ್ಮ ಕೆಲಸಗಳನ್ನು ಬಿಡುತ್ತಿರುವುವು. ನಿನ್ನ ಆಜ್ಞೆಗೆ ಆಧೀನಗಳಾಗಿದ್ದ ಅಂಗಗಳೂ ಶಿಥಿಲವಾದುವು ಮುಪ್ಪು ತಲೆಯನ್ನೇರಿತು. ಏಕೆ ವ್ಯರ್ಥವಾಗಿ ಆಯಾಸಪಡುವೆ ?

೬೨ ೧೯ ಆಕೇಕರ ದೃಷ್ಟಿಲಕ್ಷಣ—

ಶ್ಲೋ॥ ಆಕುಂಚಿತಪುಟಾಪಾಂಗ ಸಂಗತಾರ್ಧನಿಮೇಷಣಾ ।
ಮುಹುರ್ವ್ಯಾವೃತ್ತತಾರಾಚ ದೃಷ್ಟಿರಾಕೇಕರಾಮತಾ ॥

ಅರ್ಧಾರ್ಧವಾಗಿ ರೆಪ್ಪೆಗಳನ್ನು ಮುಚ್ಚಿ ತೆರೆಯುತ್ತ, ಹೆಳಕನ್ನು ನೋಡಲಾರದ ದೃಷ್ಟಿಗೆ ಆಕೇಕರವೆಂದು ಹೆಸರು.

ಪುಟ ಪಙ್ತಿ

೭೮ ೨ ಗ್ರಂಥಕರ್ತನು ಈ ಪದ್ಯದಲ್ಲಿ— ಅದ್ಭುತನೀತಿವಿಷಯಕವಾದ
ನಾಟಕಸಂವಿಧಾನಕ್ಕಾಗಿ ತಾನು ಪಟ್ಟಿರುವ ಕಷ್ಟವನ್ನು ರಾಕ್ಷಸ
ವಚನವ್ಯಾಜದಿಂದ ಹೇಳಿಕೊಳ್ಳುತ್ತಾನೆ—ಮುಖಸಂಧಿಯಲ್ಲಿ—
ಸೂಕ್ಷ್ಮವಾಗಿ ಬೀಜನ್ಯಾಸವನ್ನು ಮಾಡಿ, ಪ್ರತಿಮುಖಸಂಧಿ
ಯಲ್ಲಿ — ಆದೇ ಬೀಜವನ್ನು ಕಂಡುಕಾಣದಂತೆ ಹಬ್ಬಿಸಿ
ಗರ್ಭಸಂಧಿಯಲ್ಲಿ — ಅಳಿದುಹೋದಂತಿದ್ದ ಆ ಬೀಜವನ್ನು
ಹುಡುಕಿ ಅತಿರಹಸ್ಯವಾದ ಫಲವನ್ನು ಹೊರಗೆಡವಿ, ವಿಮರ್ಶ
ಸಂಧಿಯಲ್ಲಿ— ಅದೇ ಬೀಜವನ್ನು ಬುದ್ಧಿಯಿಂದ ವಿಮರ್ಶಿಸಿ,
ನಿರ್ವಹಣಸಂಧಿಯಲ್ಲಿ— ಸಂದರ್ಭಾನುಸಾರವಾಗಿ ಅಲ್ಲಲ್ಲಿ ಹರಡ
ಲ್ಪಟ್ಟಿರುವ ಮುಖಸಂಧಿ ಮೊದಲಾದುವುಗಳ ಅರ್ಥಗಳೆಲ್ಲವನ್ನೂ
ಒಂದೆಡೆಯಲ್ಲಿ ಸೇರಿಸಿ ಉಪಸಂಹಾರಮಾಡುವ ನಾಟಕಕರ್ತ
ನಾಗಲಿ, ಅಥವಾ ಅತಿರಹಸ್ಯದಲ್ಲಿ ಸೂಕ್ಷ್ಮವಾಗಿ ಆರಂಭಿಸಿದ
ಕಾರ್ಯವನ್ನು ತಿಳಿದೂತಿಳಿಯದಂತೆ ಒಳಗೊಳಗೇ ವೃದ್ಧಿಗೊಳಿಸಿ,
ನಷ್ಟವಾದಂತಿದ್ದ ಆ ಕಾರ್ಯದ ಫಲವನ್ನು ಗುಟ್ಟಾಗಿ ಕಾಣ
ವಂತೆ ಮಾಡಿ, ಅದನ್ನು ಬುದ್ಧಿಯಿಂದ ವಿಮರ್ಶಿಸಿ, ಕಡೆಗೆ ವಿಸ್ತಾ
ವಾಗಿ ಹರಡಿ, ಶುಭೋದರ್ಕವಾಗುವಂತೆ ಉಪಸಂಹರಿಸುವ
ನನ್ನಂತಹ ಮಂತ್ರಿಯಾಗಲಿ ಈ ಕಷ್ಟಗಳನ್ನು ಅನುಭವಿಸುವನು.

೧೦೦ ೬ ಈ ಕವಿಯು ನ್ಯಾಯಶಾಸ್ತ್ರಪ್ರವೀಣನಾದುದರಿಂದ ಆದರಂತೆ,
ಜಯಪ್ರದವಾಗುವ ಚಾಣಕ್ಯನೀತಿಯನ್ನು ಸದ್ಧೇತುವಿಗೂ
ಪರಾಜಿತವಾಗುವ ಮಲಯಕೇತು ನೈಪ್ಯವನ್ನು ಅಸದ್ಧೇತುವಿಗೂ
ಹೋಲಿಸುವನು. ಈ ಶ್ಲೋಕಾರ್ಥವನ್ನು ತಿಳಿಯುವುದಕ್ಕೆ
ಮೊದಲು ಕೆಲವು ನ್ಯಾಯಶಾಸ್ತ್ರಸಂಕೇತಗಳನ್ನು ನೆನಪಿಸಬೇ
ಬೇಕು. ಅವು ಈ ಉದಾಹರಣೆಗಳಿಂದ ವಿವರಿಸಲ್ಪಡುವುವು -

ಉದಾ—“ ಅಡಿಗೆಯಮನೆಯಂತೆ, ಹೊಗೆಯಾಡುವುದರಿಂದ ಬೆಟ್ಟದಲ್ಲಿ ಬೆಂಕಿಯುಂಟು. ಕರೆಕುಂಟೆಗಳಲ್ಲಿ ಬೆಂಕಿಯಿಲ್ಲದುದ ರಿಂದ ಹೊಗೆಯಿಲ್ಲ. ಹೊಗೆಯಿದ್ದಲ್ಲಿ ಬೆಂಕಿಯುಂಟು ; ಬೆಂಕಿ ಯಿಲ್ಲದೆಡೆಯಲ್ಲಿ ಹೊಗೆಯಿಲ್ಲ. ”

ಇಲ್ಲಿ ನಿಶ್ಚಯಿಸಲ್ಪಡಬೇಕಾದ ಬೆಂಕಿಗೆ ಸಾಧ್ಯವೆಂದು, ಅದನ್ನು ನಿಶ್ಚಯಿಸುವುದಕ್ಕೆ ಸಾಧನಾದ ಹೊಗೆಗೆ ಹೇತುವೆಂದು, ಆ ಬೆಂಕಿ ಗಾಧಾರವಾದ ಸ್ಥಳಕ್ಕೆ ಪಕ್ಷವೆಂದು, ಬೆಂಕಿಹೊಗೆಗಳಿರುವುದ ಕ್ಕುದಾಹರಣವಾದ ಅಡಿಗೆಯಮನೆಗೆ ಸಪಕ್ಷವೆಂದು, ಹೊಗೆ ಬೆಂಕಿಗಳಿಲ್ಲದ ನಿಷೇಧೋದಾಹರಣವಾದ ಕೆರೆಕುಂಟೆಗಳಿಗೆ ವಿಪಕ್ಷ ವೆಂದು, ಹೊಗೆಯಿದ್ದಲ್ಲಿ ಬೆಂಕಿಯುಂಟು-ಎಂಬುದಕ್ಕೆ ಅನ್ವಯ ವ್ಯಾಪ್ತಿಯೆಂದು, ಬೆಂಕಿಯಿಲ್ಲದಿದ್ದಲ್ಲಿ ಹೊಗೆಯಿಲ್ಲ-ಎಂಬುದಕ್ಕೆ ವ್ಯತಿರೇಕವ್ಯಾಪ್ತಿಯೆಂದು ಹೆಸರು. ಅವುಗಳಲ್ಲಿ—

ಪಕ್ಷಸಪಕ್ಷಗಳಲ್ಲಿದ್ದು ವಿಪಕ್ಷದಲ್ಲಿರದೆ ಸಾಧ್ಯವನ್ನು ವ್ಯಾಪಿ ಸಿರುವ ಹೇತುವು-ಸದ್ಧೇತುವೆಂದು, ತಾನೇ ಸಾಧ್ಯವೂ ಆಗಿ, ಸಪಕ್ಷವಿಪಕ್ಷಗಳೆರಡರಲ್ಲಿಯೂ ಇರುತ್ತ, ಅಥವಾ ಎರಡರಲ್ಲಿಯೂ ಇರದೆ, ಪಕ್ಷಕ್ಕೂ ವಿರುದ್ಧವಾದ ಹೇತುವು-ಹೇತ್ವಾಭಾಸ ಅಥವಾ ಅಸದ್ಧೇತುವೆಂದೂ ಕರೆಯಲ್ಪಡುವುದು.

ಇಂತಹ ಸದ್ಧೇತುಪ್ರಯೋಗದಿಂದ ಜಯವು, ಅಸದ್ಧೇತು ಪ್ರಯೋಗದಿಂದ ಪರಾಜಯವು ಅಥವಾ ನಿಗ್ರಹವು ಉಂಟಾಗು ವುದು. ಇದೇ ನ್ಯಾಯ (ತರ್ಕ) ಶಾಸ್ತ್ರ ಸಂಪ್ರದಾಯವು.

ಇಂತೆಯೇ ಚಾಣಕ್ಯನೀತಿಯೆಂಬ ಸದ್ಧೇತುವು-ಮೌರ್ಯರಾಜ್ಯ ಸ್ಥಿರೀಕರಣವೆಂಬ ಸಾಧ್ಯದಲ್ಲಿ, ಅನ್ವಯವ್ಯಾಪ್ತಿಯಿಂದ ನಿಶ್ಚಿತ ವಾಗಿ ವ್ಯತಿರೇಕವ್ಯಾಪ್ತಿಯಿಂದ ನಂದವಂಶನಾಶವನ್ನು ತೋರಿಸಿ,

ಪುಟ ಪಜ

ಮಲಯಕೇತುವೆಂಬ ವಿಪಕ್ಷವನ್ನು ದೂರೀಕರಿಸಿ, ರಾಜ್ಯಲಕ್ಷ್ಮೀ ಸ್ಥೈರ್ಯವೆಂಬ ಸಾಧ್ಯವನ್ನು ಸಾಧಿಸುವುದು.

ಮಲಯಕೇತುಸೈನ್ಯವೆಂಬ ಅಸದ್ಧೇತುವು–ತಮ್ಮ ಪಕ್ಷ-ಶತ್ರು ಪಕ್ಷಗಳೆಂಬ ಸಪಕ್ಷವಿಪಕ್ಷಗಳೆರಡರಲ್ಲಿಯೂ ಇದ್ದುಕೊಂಡು, ಮಲಯಕೇತುವೆಂಬ ಪಕ್ಷಕ್ಕೆ ವಿರುದ್ಧವಾಗಿ, ಉಭಯ ಸೈನ್ಯ ಗಳೂ ಮಿಶ್ರವಾಗಿರುವುದರಿಂದ, ಚಂದ್ರಗುಪ್ತಸೇನಾನಿಗ್ರಹ ರೂಪವಾದ ಸಾಧ್ಯವೇ ತಾನಾಗಿ, ದೋಷಯುಕ್ತವೆನಿಸಿದುದ ರಿಂದ ಸ್ವಾಮಿಯಾದ ಮಲಯಕೇತುವಿಗೂ, ಅಮಾತ್ಯರಾಕ್ಷಸ ನಿಗೂ ಪರಾಜಯವನ್ನುಂಟುಮಾಡುವುದು - ಎಂಬುದೇ ಈ ಶ್ಲೋಕತಾತ್ಪರ್ಯವು.

೨೧೦ ೧೦ ಮಲಯಕೇತು— ನಮ್ಮ ಕುದುರೆಗಳ ಧಾಳಿಯಿಂದ ಜನಿಸಿ, ಸ್ತಂಭದಂತೆ ಎತ್ತರವಾಗಿ ಹಬ್ಬಿದ ಧೂಳಿಯು, ಗೌಡಸ್ತ್ರೀಯರ ಕುರುಳುಗಳ ಕಪ್ಪನ್ನು ಕೆಡಿಸಿ, ಲೋಧ್ರಪುಷ್ಪಧೂಳಿಯಿಂದ ಬಿಳಿ ದಾದ ಅವರ ಕೆನ್ನೆಗಳನ್ನು ಧೂಮ್ರವರ್ಣಗೊಳಿಸಿ, ಆನೆಗಳ ಮದೋದಕಪ್ರವಾಹದಲ್ಲಿ ನುಗ್ಗಿ, ಬುಡವು ಕುಸಿದು ಹಗೆಗಳ ತಲೆಯಲ್ಲಿ ಬೀಳಲಿ.



## ಈ ನಾಟಕದಲ್ಲಿರುವ ಕ್ಲಿಷ್ಟಪದಗಳ ಅರ್ಥ.

| ಪುಟ | ಪಙ್ಕ್ತಿ | ಪದ ಅರ್ಥ |
|---|---|---|
| ೧ | ೪ | ಶೀರ್ಷ—ತಲೆ |
| | ೫ | ನಿಶ್ಚ್ಯವಂ—ನಿಶ್ಚಯ |
| | ೮ | ಆರ್ಯೆಯಂ—ಪಾರ್ವತಿಯನ್ನು |
| | ೮ | ಗೋಪಿಸಿದ—ಮರೆಮಾಚಿದ |
| | ೯ | ವಕ್ರೋಕ್ತಿ—ಕಪಟದ ವಚನ |
| | ೧೨ | ಹಸ್ತವಿಕ್ಷೇಪ—ಹಸ್ತಾಭಿನಯ |
| | ೧೩ | ಲಕ್ಷ್ಯವಂ—ನೋಡತಕ್ಕುದನ್ನು |
| | ೧೬ | ಅಭವನ, ಭವನ—ಶಿವನ |
| ೨ | ೧೫ | ಗಾವಿಲ—ಮೂಢ |
| | ೧೭ | ಕೃಷೀವಲ—ಬೇಸಾಯಗಾರ |
| ೪ | ೧೧ | ಕೇತು—ಕೇತುಗ್ರಹ, ಮಲಯಕೇತು |
| | ೧೫ | ಬುಧ—ಬುಧಗ್ರಹ, ಚಾಣಕ್ಯ |
| ೫ | ೧೫ | ಚೆಂಬೊಗರಿಂ—ಕೆಂಪುಕಾಂತಿಯಿಂದ |
| | ೨೧ | ಶಲಭಂಬೊಲ್—ದೀಪದಹುಳುವಿನಂತೆ |
| ೬ | ೪ | ಗಾಂಪಂ—ಮೂಢನು |

| ಪುಟ | ಪಙ್ಕ್ತಿ | ಪದ ಅರ್ಥ |
|---|---|---|
| ೭ | ೧೧ | ಅದವಳಲಿಂ—ದುಃಖದಿಂದ |
| | ೨೧ | ಕವಡು—ಕಪಟ |
| ೮ | ೧೬ | ಎಡರು—ವಿಪತ್ತು |
| ೯ | ೧ | ತಿಳಿವು—ತಿಳಿವಳಿಕೆ |
| | ೫ | ಕಳತ್ರ—ಹೆಂಡತಿ |
| ೧೧ | ೧ | ಇಭೇಶ್ವರರು—ಹಿಂಡಿನಸಲಗ |
| ೨೧ | ೧೨ | ಚಣಕಸುತಂ—ಚಣಕನ ಮಗ ಚಾಣಕ್ಯನು |
| ೨೪ | ೧೯ | ನೀರೆ—ಪ್ರಿಯಳು |
| | ೨೧ | ತುಷಾರಗಿರಿ—ಹಿಮಾಲಯ |
| ೨೭ | ೨೩ | ವಿಪದದೊಳ್ + ಅಂತು + ಎ ಅಂತುವೆ—ಅಂತುವೆ |
| ೩೦ | ೧೫ | ಫಣೀಜಿವಿ—ಹಾವಾಡಿಗ |
| ೩೧ | ೧೮ | ಪೊಣರ್ವೆಡೆಯೊಳ್—ಕಾದಾಡುವ ಸ್ಥಳದಲ್ಲಿ |
| ೩೧ | ೨೨ | ಸಿರಿವೆಣ್—ರಾಜ್ಯಲಕ್ಷ್ಮಿ |
| ೩೨ | ೧೧ | ಸಪತ್ನೋಚ್ಛೇದದಿಂ—ಶತ್ರುಸಂಹಾರದಿಂದ |

| ಪುಟ | ಪಙ್ಕ್ತಿ | ಪದ | ಅರ್ಥ |
|---|---|---|---|
| ೩೨ | ೨೨ | ದಾನಾಂಬು | ಮದೋದಕ |
| ೩೩ | ೨ | ಉದಿತೋದಿತ | ಪ್ರಸಿದ್ಧವಾದ |
| | ೩ | ವರಾಕಿ ! | ನೀಚಳೆ ! |
| | ೪ | ಮತಿಸ್ಫುರಣಂ | ಬುದ್ಧಿಪ್ರಕಾಶವು |
| | ೨೨ | ಭಾವಿಸದಿರೆ | ರಕ್ಷಿಸದಿದ್ದರೆ |
| ೩೪ | ೩ | ಜರೆ | ಮುದಿತನ |
| | ೬ | ಅಂತಗವಾಂತು | ಸಮಯವರಿತು |
| ೩೫ | ೨ | ಪಂದೆ | ಹೇಡಿ |
| | ೩ | ಅನ್ನವರಂ | ಅಲ್ಲಿಯವರೆಗೆ |
| | ೫ | ಹರಿಪೀಠಮಂ | ಸಿಂಹಾಸನವನ್ನು |
| | ೬ | ಎನ್ನವರಂ | ಎಲ್ಲಿಯವರೆಗೆ |
| ೩೬ | ೨೦ | ಅರಡಿ | ಭ್ರಮರ |
| ೩೭ | ೧೪ | ಅಗಿದು | ಹೆದರಿ |
| | ೧೫ | ಪರಿರಂಭ | ಆಲಿಂಗನ |
| ೩೮ | ೨೧ | ತಳುವದೆ | ತಡಮಾಡದೆ |
| ೩೯ | ೧೦ | ಕಾಮುರ್ಗಿಲ್ | ಕರೀಮೋಡ |

| ಪುಟ | ಪಙ್ಕ್ತಿ | ಪದ | ಅರ್ಥ |
|---|---|---|---|
| ೩೯ | ೧೧ | ಚಲಜಲವೃತ್ತಿ | ತರಂಗಗಳಂತೆ ಹಾರಾಡುವ |
| ೪೦ | ೪ | ರವಿಸುತಂ | ಕರ್ಣನು |
| ೪೫ | ೧೭ | ಅಂತರಾಯ | ವಿಘ್ನ |
| | ೨೧ | ಆದಿಫಣಿಪಂ | ಆದಿಶೇಷ |
| | ೨೨ | ಹರಿದಶ್ವಂ | ಸೂರ್ಯನು |
| ೪೬ | ೨ | ಪೂಣ್ದುದಂ | ಪ್ರತಿಜ್ಞೆಯನ್ನು |
| | ೩ | ಗೋತ್ರವ್ರತಂ | ಕುಲಧರ್ಮವು |
| ೪೭ | ೧೨ | ಎಸಕಗಳ | ಕಾರ್ಯಗಳನ್ನು |
| ೪೮ | ೨೦ | ಮೂರ್ಧಕೆ | ತಲೆಗೆ |
| ೫೨ | ೧೭ | ಮ.ಲಿತಿಪರ್ೞ | ಗರ್ವಿಸಿರುವನು |
| ೫೪ | ೨೦ | ಪಂಥನ | ತಿರಸ್ಕಾರ |
| ೫೫ | ೭ | ಬಲ್ಲಿದರ್ | ವಿದ್ವಾಂಸರು |
| ೫೬ | ೫ | ಎರೆಯನಲ್ಲಿಗೆ | ಗಂಡನಬಳಿಗೆ |
| ೫೮ | ೧ | ದುಸ್ಸಚಿವರ್ | ದುಷ್ಟಮಂತ್ರಿಗಳು |
| | ೧೦ | ಕೈತವದೆ | ಕೃತ್ರಿಮದಿಂದ |
| ೬೨ | ೧೫ | ಅಭಿಯೋಗದುಃಖ | [illegible] |

2

| ಪುಟ | ಪಙ್ಕ್ತಿ | ಪದ — ಅರ್ಥ | ಪುಟ | ಪಙ್ಕ್ತಿ | ಪದ — ಅರ್ಥ |
|---|---|---|---|---|---|
| ೬೨ | ೧೮ | ವೈರಿರ್ಚಿ — ವೈರವುಂರಿಹುಕೊಂಡು | ೯೪ | ೬ | ಲವಿತ್ರ — ಕುಡುಗೋಲು |
| | ೧೮ | ಫಣೋಪಧಾನ — ಹೆಡೆಯೆಂಬ ತಲೆದಿಂಬು | ೯೫ | ೧೨ | ಮುನ್ನಡೆವಳಿ — ಪೂರ್ವವೃತ್ತಾಂತ |
| ೬೩ | ೨೩ | ಪಳಂಚಲೆವ — ತಿರಸ್ಕರಿಸುವ | | ೧೩ | ಬೇರೊಡಲಂ — ಬೇರೇ ಶರೀರವನ್ನು |
| ೬೪ | ೮ | ಕರ್ಪೂರಗರ್ — ಕಪ್ಪುಕಾಂತಿ | ೯೬ | ೮ | ಮಾದೃಶ — ನನ್ನಂತಹ |
| ೬೯ | ೪ | ತುಳಿಲಾಳ್ — ಶೂರನು | ೧೦೨ | ೨ | ಬಳ್ಕದ — ಚಲಿಸದ |
| ೭೦ | ೨ | ಕಿನಿಸಿದ — ಕೋಪಗೊಂಡ | | ೪ | ದುರ್ಧಾರ್ಯ — ಧರಿಸಲಾರದ |
| ೭೧ | ೨೨ | ಜೋದ — ಮಾವಟಿಗ | ೧೦೬ | ೨ | ಬೆರಳ್ಚಿರಸು — ಬೆರಲೊಡಗೂಡಿ |
| ೭೩ | ೪ | ಅನತಿಕ್ರಮಣೀಯ — ಮೀರಲಾಗದ | ೧೦೭ | ೮ | ನಿರ್ನಿರಂ — ನಿಷ್ಕಾರಣವಾಗಿ |
| ೭೫ | ೭ | ಕಲ್ಯಾಣಕುಲಧರ — ಮೇರುಪರ್ವತ, ಉತ್ತಮಕುಲ | ೧೦೮ | ೧೦ | ಪಳಿವಿಗೆ — ತಿರಸ್ಕಾರಕ್ಕೆ |
| ೭೮ | ೯ | ಸ್ವೈರಾಲಾಪ — ಸ್ವಚ್ಛಂದಭಾಷಣ | | ೧೬ | ಗರಳ — ವಿಷ |
| ೭೯ | ೯ | ಕುಮುದ — ದುಷ್ಟರು, ನೈದಿಲೆ | ೧೧೦ | ೭ | ತುಂಬಿಗುರುಳ್ — ಭ್ರಮರದಂತಿರುವ ಕೇಶಗಳು |
| ೮೨ | ೬ | ಪಾರದೆ — ನೋಡದೆ | | ೮ | ಲೊದ್ದ ದೂಳಂ — ಲೋಧ್ರಪುಷ್ಪಧೂಳಿಯನ್ನು |
| | ೭ | ಅಶ್ರುತವುಂ — ಪ್ರತಿಜ್ಞೆಯನ್ನು | | ೮ | ಬೆಳ್ಗದಪಂ — ಬಿಳೀಕೆನ್ನೆಗಳನ್ನು |
| ೮೫ | ೩ | ದಳದುಳಿ — ಲಗ್ಗೆ ಹತ್ತುವುದು | | ೨೧ | ಕೃತವೇದಿಭಾವದಿಂ — ಕೃತಜ್ಞತೆಯಿಂದ |
| ೮೬ | ೫ | ಅಬೋಧ — ಅಜ್ಞಾನ | ೧೧೧ | ೧೦ | ದಂದುಗ — ದುಃಖ |
| | ೬ | ಚಿನವುಕಾಭಿಜ್ಞರು | | ೧೩ | ದೂರಂದಳರಲ್ — ದೂರವಾಗಿಹೋದಲ್ಲಿ |

| ಪುಟ | ಪಙ್ಕ್ತಿ | ಪದ — ಅರ್ಥ |
|---|---|---|
| ೧೧೧ | ೧೭ | ಬಿದೆಗೊಳಿಸಂ — ವ್ಯಥೆಪಡಿಸುವುದು |
| ೧೧೩ | ೧೧ | ಕಶಾಭಿಘಾತ — ಚಾವಟಿಯಪೆಟ್ಟು |
| | ೧೨ | ವಾರುವ — ಕುದುರೆ |
| ೧೧೫ | ೧೧ | ಅನುವಾದುದು — ಅನುಸರಿಸಿತು |
| | ೧೬ | ಪೌರುಷಕಾರ — ಪುರುಷಪ್ರಯತ್ನ |
| | ೨೦ | ಅತುಲಿತ — ಸಾಮ್ಯವಿಲ್ಲದ |
| | ೧೮ | ಬಾಯ್ವಾಸು — ಕಡಿವಾಣ |
| | ೧೯ | ವಾಜಿಯಂ — ಕುದುರೆಯನ್ನು |
| | ೨೨ | ಉಮ್ಮಳವ — ದುಃಖವನ್ನು |
| ೧೧೬ | ೬ | ಪೊಳಲಚರ್ — ಪಟ್ಟಣಿಗರು |
| | | ಪೊಳಲೊಳಸಾರೆ — ಪಟ್ಟಣವನ್ನು ಹೊಗಲು |
| | ೧೩ | ಕರುವಾಡಂ — ಉಪ್ಪರಿಗೆಯು |
| | ೧೯ | ಪರಶು — ಕೊಡಲಿ |
| ೧೧೮ | ೧ | ಅಹಿಗಳ್ — ಸರ್ಪಗಳು |
| | ೨೪ | ಕುರಿಹದೊಳ್ — ಬೇಗನೆ |

| ಪುಟ | ಪಙ್ಕ್ತಿ | ಪದ — ಅರ್ಥ |
|---|---|---|
| ೧೨೪ | ೬ | ಉಗ್ಗಡಿಸುತೆ — ವಿಜೃಂಭಿಸುತ್ತ |
| | ೬ | ರಣಶಾಣ — ಯುದ್ಧವೆಂಬ ಒರೆಗಲ್ಲು |
| | ೮ | ಪೊಡರ್ಪು — ಪರಾಕ್ರಮ |
| ೧೨೬ | ೧೩ | ಭಿಲ್ಲಗೇ — ಬೇಡರಿಗೆ |
| ೧೨೯ | ೨೩ | ವೃತಿವಾಲೆಯಂ — ಗಲ್ಲಿಗೇರಿಸುವಾಗ ಹಾಕುವ ಹೂಮಾಲೆ |
| ೧೩೦ | ೧೧ | ಕರಗೊಂಬಂತಿರೆ — ಕಳಂಕಿತವಾಗುವಂತೆ |
| ೧೩೧ | ೨೨ | ನೀರಾಗದೆ — ಪ್ರೀತಿಯಿಲ್ಲದುದರಿಂದ |
| ೧೩೩ | ೯ | ಫಲ — ಅಲಗು ಮತ್ತು ಪ್ರಯೋಜನ |
| | ೧೦ | ವಿಪಕ್ಷ — ರೆಕ್ಕೆಯಿಲ್ಲದುದು, ಶತ್ರು |
| | ೧೨ | ತೂಣಿ — ಬತ್ತಳಿಕೆ |
| ೧೩೪ | ೭ | ಯೂಥೈಶ್ವರ್ಯ — ಹಿಂಡಿನ ದೊರೆತನ |
| | ೯ | ಷಾಡ್ಗುಣ್ಯ — ಸಂಧಿ, ವಿಗ್ರಹ, ಯಾನ, ಆಸನ ದ್ವೈಧೀಭಾವ, ಸಮಾಶ್ರಯ, ಷಡ್ಗುಣಗಳು |
| ೧೩೫ | ೧೦ | ಪಲ್ಲಣ — ಕುದುರೆಯಜೀನು. |



